# ಎರಡು ನಾಟಕಗಳು

['ಮಹಾರಾತ್ರಿ' ಮತ್ತು 'ಶ್ಮಶಾನ ಕುರುಕ್ಷೇತ್ರಂ']

ಕುವೆಂಪು



ಉದಯರವಿ ಪ್ರಕಾಶನ
ವಾಣೀವಿಲಾಸಪುರಂ, ಮೈಸೂರು-೨

ಮೊದಲನೆಯ ಮುದ್ರಣ: ೧೯೩೧

ಉದಯರವಿ ಪ್ರಕಾಶನದಿಂದ ಪರಿಷ್ಕೃತವಾದ ಮೊದಲನೆಯ ಮುದ್ರಣ: ೧೯

ಎರಡನೆಯ ಮುದ್ರಣ: ೧೯೬೭

ಮೂರನೆಯ ಮುದ್ರಣ: ೧೯೭೨

ಎರಡು ನಾಟಕಗಳು ಒಟ್ಟಾಗಿ ಮೊದಲನೆಯ ಮುದ್ರಣ: ೧೯೭೪



ಬೆಲೆ: ರೂ. ೨ (ಪಠ್ಯಪುಸ್ತಕ ಆವೃತ್ತಿ)

ಮುದ್ರಕರು: ಉಷಾ ಪ್ರೆಸ್, ಮೈಸೂರು

# ಮಹಾರಾತ್ರಿ

## ಪಾತ್ರಗಳು

[ಸಿದ್ಧಾರ್ಥ, ಚನ್ನ, ಮಾರ, ಕಿನ್ನರ, ಯಕ್ಷ, ಗಂಧರ್ವ, ಕೈಲಾಸ, ರಾಲ, ಭಿಕ್ಷುಕ, ಯಶೋಧರೆ, ದೂತಿಯರು ಮತ್ತು ಮೊದಲಾದವರು]

## ಪೀಠಿಕಾ ದೃಶ್ಯ

[ಹಿಮಗಿರಿಯ ಮೇಲೆ ಯಕ್ಷ ಕಿನ್ನರರಿಬ್ಬರು ಕಾಣಿಸಿಕೊಂಡು ಬ್ರಹ್ಮಾಂಡವನ್ನು ಸಂಬೋಧಿಸಿ ಡಂಗುರ ಸಾರುತ್ತಾರೆ.]

ಕಿನ್ನರ— ಇದು ಮಹಾರಾತ್ರಿ ; ಸಿದ್ಧಾರ್ಥ ಬುದ್ಧನಾ
ಗುವ ರಾತ್ರಿ ; ಸಗ್ಗದೊಲವಿಳೆಗಿಳಿವ ರಾತ್ರಿ !

ಯಕ್ಷ— ಜೀವಜ್ಯೋತಿಯದೊಂದು ಧರೆಯ ಮೇಲ್ಬೈತಂದು
ಬುದ್ಧರೂಪದಿ ನಿಂದು ಮೈದೋರುವುದು ಇಂದು !

ಕಿನ್ನರ— ವೈರಾಗ್ಯ ಮಾರನಂ ಸೋಲಿಸುವುದಿಂದು ?

ಯಕ್ಷ— ಸತ್ಯ ಮಿಥ್ಯೆಯನೊದೆವುದಿಂದು !

ಕಿನ್ನರ— ಭೂರಮೆಯು
ಸ್ವರ್ಗರಮೆಯನ್ನಪ್ಪುವಾ ರಾತ್ರಿ. ಮಂಗಳದ
ಸೊದೆ ಸುರಿವ ರಾತ್ರಿ. ಇದು ಚಿರಸ್ಮರಣೀಯ
ವಾಗಿರುವ ರಾತ್ರಿ.

ಯಕ್ಷ— ನಲಿಯಿರಿ, ಅದರಿಂದ
ಉಡುಗಳಿರ ! ... ! ವಿಶ್ವವೇ




ಕಿನ್ನರ— ಎಲೆ ತುಹಿನಗಿರಿರಾಜ,
ಶಿರದಿ ನಾಕದ ಭಾರವನು ಹೊತ್ತು ನೀನಿಂತು

ಧ್ಯಾನದೊಳಗಿದ್ದುದದು, ಬರಿದಾಗಲಿಲ್ಲ!
ನೋಡಲ್ಲಿ! ಬುದ್ಧನಾಗುವನಿಂದು, ಈ ರಾತ್ರಿ,
ಜಾಗಕೆಳಸುತ್ತಿಹನು!

[ಗಂಧರ್ವನೊಬ್ಬನು ಪ್ರವೇಶಿಸುತ್ತಾನೆ]

ಗಂಧರ್ವ— (ಸ್ವಗತ) ಯಾರೊ ಮಾತಾಡಿದುದನಾಲಿಸಿದೆನಲ್ಲವೆ?
ಮೇಣ್ ಬರಿಯ ಭ್ರಾಂತಿಯೋ? (ಸುತ್ತ ನೋಡಿ ಹರ್ಷದಿಂದ)
ಈ ಗಿರಿಯ ಮೇಲಿರುವು
ದೇನುತುಳ ಶಾಂತಿ! ಹಿಮಗಿರಿಯ ಗಾಢದಿಂ
ದಪ್ಪಿ, ಮುದ್ದಿಟ್ಟು, ಮಲಗಿರುವ ಕೌಮುದಿಯು,
ತಾಯೆದೆಯ ಪೀಯೂಷ ಪಾನದಿಂದಾನಂದ
ಹೊಂದಿ, ಅರೆಯರಳಿರುವ ಕಣ್ಣವೆಯ ಪಿಳಿಪಿಳನೆ
ಬಿಟ್ಟಿದೆಯನಾಲಿಂಗಿಸೊರಗಿರುವ ಶಿಶುವಂತೆ
ರಮಣೀಯವಾಗಿಹುದು! ಶಿವನ ಪಾದವ ಪೂಜೆ
ಮಾಡಲೆಂದೆಳಸಿ, ಪರಮೇಶ ತನ್ನೆಡೆಗೆ
ಬಾರದಿರೆ, ತಾವೆ ಕೈಲಾಸಕಡರುತಿಹ
ಬಿಳಿಯ ಬಣ್ಣದ ಮಹಾ ಕಮಲಗಳ ತೆರದಿ,
ಮಂಜುಗಡ್ಡೆಯ ಹೊತ್ತ ಧವಳಗಿರಿ ಶೃಂಗಗಳು
ಮೆರೆದು ಮನಮೋಹಿಸುತ ಮೌನೋಪದೇಶವಂ
ಮಾಡುವಂತೆಸೆದಿಹವು. ಈ ರಾತ್ರಿ, ಈ ಮಹಾ
ಹಿಮಗಿರಿಯ ಶೃಂಗದೊಳು ಯಾರಾದರೇನನ್
ಎಸಗುವರು? ಕಜ್ಜವೇನಿರಬಹುದು? ಹೌದು,
ನಾನಾ ತುಷಾರಾಸನದೊಳೊರಗಿದಾಗಳ್
ಮಂಗಳ ನಿನಾದವೆಂಬಂತೆ, ದೂರದಿಂ
ದಿಂಪಾಗಿ ನಲಿನಲಿದು, ಗಾಳಿಯಲೆಗಳಲೆದು
ಧ್ಯಾನದಿಂದೆನ್ನನ್ ಎಚ್ಚರಿಸಲಿಲ್ಲವೆ?

ಯಕ್ಷ— (ಕಾಣಿಸಿಕೊಂಡು)
ಗಂಧರ್ವ, ಸಂತಸದ ಸುದ್ದಿಯೊಂದನು ನೀನು
ಕೇಳಿದೆಯ?

ಗಂಧರ್ವ— (ಹಿಂತಿರುಗಿ ವಿನಯದಿಂದ) ಇಲ್ಲೇನ ಮಾಡುವಿರಿ? ನೀರವದ ಕಟ್ಟಿರುಳೊಳಿಲ್ಲಿ? ಅಂಬರನಿವಾಸಿಗಳೆ!

ಕಿನ್ನರ— ಎಲೆ ಗೆಳೆಯ, ಮಂಗಳದ ವಾರ್ತೆಯನು ಜಗಕೆಲ್ಲ
ಸಾರುತಿಹೆವು.

ಗಂಧರ್ವ— ಸಂತಸದ ಸಂದೇಶವೇನು?

ಯಕ್ಷ— ಶಾಕ್ಯರರಸರ ಪುತ್ರ ಸಿದ್ಧಾರ್ಥನೀ ರಾತ್ರಿ
ಬುದ್ಧನಾಗುವನೆಂಬುದೇ ಶುಭದ ವಾರ್ತೆ!

ಗಂಧರ್ವ— ಹಾಗಾದರಿಂದು ಭಾರತಾಂಬೆಯೆ ಧನ್ಯೆ!

ಕಿನ್ನರ— ಅಲ್ಲವೇ, ಗಂಧರ್ವ!

ಯಕ್ಷ— ಯಜ್ಞಯಾಗಾದಿಗಳ
ಹಿಂಸೆಯಲ್ಲಿ ಬೆಂದು, ಕೃತ್ರಿಮದ ವೈದಿಕರ
ದೌಷ್ಟ್ಯದೊಳು ನೊಂದು, ಒಣವೇದ ಪಂಡಿತರ
ವಾದದೊಳು ಮುಳುಮುಳುಗಿ ಗೋಳಿಡುವ ಭಾರತಿಯ
ಪುಣ್ಯಗಗನದ ಪೂರ್ವದೊಳು, ನೋಡು, ಹರ್ಷದರು-
ಣೋದಯವು ಶೋಭಿಸುವುದೆಂತು!

ಕಿನ್ನರ— ನೋಡದೋ,
ಗಂಧರ್ವ, ಭಾರತಾಂಬೆಯು ತನ್ನ ಪರಮ
ಪುಣ್ಯೋದಯಕೆ ಹಿಗ್ಗಿ ಬಿಡುಗಡೆಯ ನಿಟ್ಟುಸಿರ್
ಬಿಟ್ಟು ನಲಿದಿಹಳು.

ಯಕ್ಷ— ನೋಡಲ್ಲಿ! ಮುಂದೆ ಬಹ
ಬುದ್ಧನಿಗೆ ಕಾಣಿಕೆಯ ತಂದೊಪ್ಪಿಸಲು ಧರ್ಮ
ದೇವತೆಯು ಬಿಳಿಯ ಸೀರೆಯನುಟ್ಟು, ಅರೆಯರಳಿ
ದಂತಿರುವ ಕಣ್ಬೆಳಕ ಬೀರಿ ಸಡಗರದಿಂದ
ಬರುತಿಹಳು.

ಗಂಧರ್ವ— ನೋಡಿರೆಲೆ ಬಾಂಧಳದ ಬಂಧುಗಳೆ,
ಪುಣ್ಯದೇವಿಗೆ ಒದಗಿದೀ ಭಾಗ್ಯವನು ಕರುಬಿ
ಪಾಪ ಮಾರಿಯು ತನ್ನ ದೂತರಾವಳಿಯನ್
ಅಟ್ಟುತಿಹಳಲ್ಲಿ ಗೌತಮನ ಮೋಹಿಸಲು!

ಕಿನ್ನರ— ಗೌತಮಗೆ ಬಂದೊದಗಬಹುದಾದ ಕಷ್ಟಗಳನ್
ಎಲ್ಲ ಪರಿಹರಿಸಲೆಂದೇ ನಾವು ಹೊರಟಿಹೆವು.

ಯಕ್ಷ— ಹಾಗಾದರಿನ್ನೇಕೆ ತಡ? ಹೊರಡೋಣ
ಬನ್ನಿ.

ಗಂಧರ್ವ—(ಕಿನ್ನರನ ಕಡೆ ದಿಟ್ಟಿಸಿ ನೋಡಿ)
ಕಿನ್ನರಾ, ನಿನ್ನ ಕರತಳದೊಳ್
ಆರಾಜಿಸುವುದೇನು? ಶಶಿತಾರೆಗಳಿಗೆಲ್ಲ
ಬೆಳಕ ದಯಪಾಲಿಸುತ ರಂಜಿಸುವುದೇನು?

ಯಕ್ಷ— ಅಧಿಕಾರ ಮಕುಟವದು!

ಕಿನ್ನರ— ಅರಿಯೆಯಾ, ಗಂಧರ್ವ?
ಅವತಾರಪುರುಷರೀ ಧರೆಯಲ್ಲಿ ಜನ್ಮಿಸಲು
ಜಗದೊಡೆಯನವರಿಗೀ ಅಧಿಕಾರ ಮಕುಟವನು
ಕಳುಹುವನು!

ಯಕ್ಷ— ಜಗಕವರು ತತ್ತ್ವಬೋಧೆಯ ಮಾಡೆ
ಆಣತಿಯನೀಯುವನು! ಅಧಿಕಾರ ಮಕುಟವಿದು
ಸಾಮಾನ್ಯವಾದುದೆಂದರಿಯದಿರು. ಬಹು ಸಂಖ್ಯೆ
ಅವತಾರಗಳ ಶಿರವ ಸಿಂಗರಿಸಿ ಬಂದಿಹೆ
ಕಿರೀಟವಿದು. ಪಾವನಕೆ ಪಾವನವ, ಮಂಗಳಕೆ
ಮಂಗಳವನೀವ ತಲೆದೊಡವು ಇದು. ಈ ರಾತ್ರಿ
ಗೌತಮನ ಬುದ್ಧನನ್ನಾಗಿ ಮಾಡುವ ಪುಣ್ಯ
ಮೌಳಿಯಿದು. ಬನ್ನಿ, ಬುದ್ಧನಿಗೆ ನೆರವಾಗಿ
ಧನ್ಯರಾಗುವ ಬನ್ನಿ!

(ತೆರಳುತ್ತಾರೆ.)

ಪರದೆ

## ದೃಶ್ಯ ೧

[ಅರಮನೆಯ ಪಕ್ಕದ ಒಂದು ಉದ್ಯಾನವನದಲ್ಲಿ ಸಿದ್ಧಾರ್ಥನು ತಿರುಗಾಡುತ್ತಿದ್ದಾನೆ.]

ಸಿದ್ಧಾರ್ಥ— ಇಲ್ಲ; ಇನ್ನಿಲ್ಲಿ ಇರಲಾರೆ, ಇರಲಾರೆ!

ಎಳೆಯ ಕರೆಯನು ಕೇಳಿಯೂ ಸುಮ್ಮನಿರಲಾರೆ.
ಆತ್ಮದಾಮಂತ್ರಣವನೋದಿಯೂ ಭೋಗಾಭಿ-
ಲಾಷೆಯಿಂದಿನ್ನು ನಾನಿರಲಾರೆ. ವರಧರ್ಮ
ದೇವತೆಯು ಗುಡಿಗಳಿಂ, ಹೊಲಗಳಿಂ, ವನಗಳಿಂ,
ಸೌಧಸೌಧಂಗಳಿಂ ಕೈಬೀಸಿ ಗೋಳಾಡಿ
ಕರೆವುದನು ಕಂಡೂ ಮೊದ್ದನಾಗಿರಲಾರೆ. (ವಾದ್ಯ.)
ನಾದವೇನಿದು ? ವಾದ್ಯಗಳ ನಿನದ ! ನನಗರಿಯ
ದಂಥಾವ ಶುಭವಿಂದು ಬಂದಿಹುದು ?—ನನಗೇನು ?
ದನಿಯ ಬೀರಿರಿ ವಾದ್ಯಗಳಿರ ! ನಿಮ್ಮಗಳ
ಭಾಗಕ್ಕೆ ಕಿವುಡನಾಗಿಹೆನಿಂದು. ಇಲ್ಲ; ನಾನ್
ಇರಲಾರೆನಿನ್ನು ! ಇಂದಿನಿರುಳನು ಬಿಟ್ಟರೆ
ಎನಗಿನ್ನು ಗತಿಯಿಲ್ಲ. ನಾಳೆ ನಾಳೇ ಎಂದು
ವರ್ಷಗಳ ಕಳೆದಾಯ್ತು ! ನಾಳೆ ಎಂದಿಗು ನಾಳೆ !
ಇಂದಿಂದೆ ! (ಚನ್ನನು ಓಡುತ್ತಾ ಬರುತ್ತಾನೆ.)

ಚನ್ನ— ಶುಭ ಸುದ್ದಿ ! ಶುಭ ಸುದ್ದಿ ! ನನ್ನೊಡೆಯ !

(ಸಿದ್ಧಾರ್ಥನು ಗಂಭೀರವಾಗುತ್ತಾನೆ.)

ಏನುದಾಸೀನನಾಗಿಹೆಯಲ್ಲ, ಸಿದ್ಧಾರ್ಥ ?

ಸಿದ್ಧಾರ್ಥ— ಏನು ಶುಭ ಸುದ್ದಿ, ಚನ್ನಜ್ಜ ? ಮಂಗಳ
ನಿನಾದಗಳು ನಭಕೇರುತಿಹವಲ್ಲ ಏಕೆ ?

ಚನ್ನ— ಅದೆ ಶುಭದ ವಾರ್ತೆ,
ಸಿದ್ಧಾರ್ಥ. ನಿನಗೊಂದು ಗಂಡುಶಿಶು ಹುಟ್ಟಿಹುದು !
ಪುಣ್ಯಕುದಿಸುವ ತೆರದಿ ಬಣ್ಣ !

ಸಿದ್ಧಾರ್ಥ— (ಅಂತರ್ಮುಖಿಯಾಗಿ) ಮತ್ತೊಂದು
ಪಾಶ. ಕಬ್ಬಿಣದ ಸರಪಣಿಯ ಬಂಧನ !
ದಿನ ಕಳೆದ ಹಾಗೆಲ್ಲ ಬುವಿಯ ಜಾಲವು ನಮ್ಮ
ಸುತ್ತುವುದೆ ಹೊರತು, ಬಿಗಿಬಿಗಿಯುವುದೆ ಹೊರತು
ಬಿಚ್ಚಿಬಿಡುವುದು ಎಂಬ ನೆಚ್ಚ ನಾ ಕಾಣೆ.

ಚನ್ನ— ಏಕಿಂತು ಮೌನವಾಗಿಹೆ, ಒಡೆಯ ?

ಸಿದ್ಧಾರ್ಥ— (ಗಂಭೀರವಾಗಿ) ಸಾರಥಿ,
ಚನ್ನ, ಇತ್ತ ಬಾ, ನನಗಿಂದು ನಿನ್ನ ನೆರ
ವಾಗಲೇಬೇಕು. (ಸಂಗೀತ) ಏನು ಸಂಗೀತವಿದು ?

ಚನ್ನ— ಪುತ್ರೋದಯದ ಹರುಷಕಾಗಿ ಅಂಗನೆಯರ್
ಉಲಿಯುವರು ಮಂಗಳದ ಹಾಡುಗಳ. ಕೇಳು,
ಎಷ್ಟು ಮೃದುಮಧುರವಾಗಿಹುದು !

ಸಿದ್ಧಾರ್ಥ— (ಸ್ವಗತ) ಎಲೆ ಗಾನ-
ದೇವತೆಯೆ, ನಿನ್ನ ಮೋಹದ ಮುಡಿಯು ಸಿಡಿದೊಡೆವು
ದಿಂದು ! ಆತ್ಮಗೀತವು ಕರ್ಣಗೀತವನು
ಏಳಿಸುತಲಿಹುದಿಂದು. ಅಮೃತ ಪಾನದ ಬಯಕೆ
ನಾಡಹಾಲಿನ ಬಯಕೆಯನ್ನಟ್ಟಿಬಿಟ್ಟಿಹುದು.
(ಗಟ್ಟಿಯಾಗಿ) ಚನ್ನ !

ಚನ್ನ— (ಅನ್ಯಮನಸ್ಕ) ಎಷ್ಟು ಹೃದಯಂಗಮ, ಸಂಗೀತ !
ಏಕೆ, ಸಿದ್ಧಾರ್ಥ, ಗಾನವೆನೆ ತನುಮನಗಳ್
ಎಲ್ಲವನು ಮರೆತು ಕೇಳುತಲಿದ್ದ ನೀನಿಂದು
ಸರಗೈವ ರಮಣಿಯರನಾಲಿಸದೆ, ಚಿಂತಾತ್ಮನ್
ಆಗಿರುವೆಯಲ್ಲ ?

ಸಿದ್ಧಾರ್ಥ— (ನಟ್ಟನೋಟದಿಂದ) ಹೌದು, ಚನ್ನ, ಹೌದು !
ಇರಲಿಯದು. ಇತ್ತ ಬಾ. ನನಗಿಂದು ನಿನ್ನ ನೆರ-
ವಾಗಲೇಬೇಕು.

ಚನ್ನ— ಸಾರಥಿಯನೀ ರೀತಿ
ಕೇಳುವರೆ ? ಬೆಸಸು, ಕಿಂಕರ ನಾನು.

ಸಿದ್ಧಾರ್ಥ— ಇನ್ನು ನೀನ್
ಎನ್ನ ಸಾರಥಿಯಲ್ಲ.

ಚನ್ನ— (ದೈನ್ಯದಿಂದ) ಕೆಲಸದಿಂ ಬಿಡಿಸುವೆಯ ?
ಬೇಡ, ಗೌತಮ, ಬೇಡ. ನಾ ಮುದುಕ, ನಿರ್ಗತಿಕ !
ನಾನೆಸಗಿದಪರಾಧವಾದರೂ ಏನು ?
ಮನ್ನಿಸೆನ್ನೊಡೆಯ.

ಸಿದ್ಧಾರ್ಥ— (ಕರುಣೆಯಿಂದ) ಹಾಗಲ್ಲ, ಕೇಳಿಲ್ಲಿ.

ಚನ್ನ— ಇಲ್ಲ, ಬೇಡ! ಬೇಡ! ನಿನ್ನ ಬಿಟ್ಟರೆ ನಾನು
ಸಾಯುವುದೆ ಸರಿ. ಚನ್ನನೆದೆಯಲ್ಲಿ ನೀನಲ್ಲ
ದಿನ್ನಾರು ನೆಲಸಿಲ್ಲ!

ಸಿದ್ಧಾರ್ಥ— (ಸ್ವಗತ) ಪಾಪ, ಮುದುಕನಿವ!
(ಗಟ್ಟಿಯಾಗಿ) ಚನ್ನಜ್ಜ, ಕೇಳಿಲ್ಲಿ, ನಿನ್ನ ನಾ ಬಿಡಲಾರೆ,
ಹೆದರದಿರು.

ಚನ್ನ— (ಸಂತಸದಿಂದ) ನೀನೀಗ ಸಿದ್ಧಾರ್ಥ! ಮತ್ತೇನು?

ಸಿದ್ಧಾರ್ಥ— ಇಂದು ನಾ ಬಹು ದೂರ ಹೊಗಬೇಕೆಂದಿರುವೆ.

ಚನ್ನ— (ಆಶ್ಚರ್ಯದಿಂದ)
ಯಾವೆಡೆಗೆ ಸಿದ್ಧಾರ್ಥ? ಇಂದೇಕೆ? ಮಾತೇನು?
ಮಗನು ಹುಟ್ಟಿದ ದಿನವೆ ತಂದೆ ಹೋದರೆ ದೂರ,
ಲೋಕವೇನೆನ್ನುವುದು?

ಸಿದ್ಧಾರ್ಥ— ಚನ್ನ, ನೀನೆನಗೆ
ಬೇಕಾದವನು, ಕೇಳು. ಇಂದಿನಿರುಳೇ ನಾನು
ತಿರೆಸಿರಿಗಳೆಲ್ಲವನು ಬಿಸುಟು ಮುಕ್ತಿಶ್ರೀ
ಯನ್ನರಸಿ ಹೊರಡುವೆನು.

ಚನ್ನ— ಏಕೆ, ನನ್ನೊಡೆಯ,
ಇಲ್ಲಿ ಸೊಗವಿಲ್ಲವೇ ನಿನಗೆ?

ಸಿದ್ಧಾರ್ಥ— (ವ್ಯಾಕುಲತೆಯಿಂದ) ಚನ್ನಜ್ಜ,
ನಾನೊಬ್ಬ ಸುಖಿಯಾದರೇನಾಯ್ತು? ಲೋಕವೇ
ಬೊಬ್ಬಿರಿಯುತಿಹುದಲ್ಲ ಬೆಂದು ಬಡತನದಲ್ಲಿ.
ಮೌಢ್ಯಾಂಧಕಾರದೊಳು ಸಿಕ್ಕಿ, ದಾರಿಯ ತಪ್ಪಿ,
ಕಾಡುಪಾಲಾಗಿಹಳು ಭಾರತಾಂಬೆಯು, ಚನ್ನ,
ಕಾಡುಪಾಲಾಗಿಹಳು! (ನಿಟ್ಟುಸಿರುಬಿಟ್ಟು)
ಚನ್ನಜ್ಜ, ನಿನಗೆಲ್ಲ
ಬಣ್ಣಿಸಲು ಸಮಯವಿಲ್ಲೀಗ. ನನಗಿಂದು
ನೆರವಾಗುವೆಯ ಹೇಳು.

ಚನ್ನ— ಎದೆಯೇಕೊ ನಡುಗುತಿದೆ,
ಒಡೆಯ. ನೀನೇನು ಮಾಡುವೆಯೊ ನಾನರಿಯೆ.
ನಿನ್ನ ಚಿತ್ತವನರಿಯೆ. ಆದೊಡೆಯು ನಿನ್ನಲ್ಲಿ
ನೆಚ್ಚುಂಟು ಎನಗೆ. ಇಂದು ಹೋದವನೆಂದು
ಹಿಂದಕ್ಕೈತರುವೆ ?

ಸಿದ್ಧಾರ್ಥ— ಎಂದಿಗೋ ನಾನರಿಯೆ,
ಸಾರಥಿ.

ಚನ್ನ— ಒಂದು ವಾರವೆ ? ಎರಡೆ ? ಮೇಣ್ ಮೂರೆ ?

ಸಿದ್ಧಾರ್ಥ— ಅದಕಿಂತ ಹೆಚ್ಚು, ಚನ್ನಜ್ಜ, ಅದಕಿಂತ
ಹೆಚ್ಚು.

ಚನ್ನ— ಹಾಗಾದರೇನೊಂದು ತಿಂಗಳೆ ?

ಸಿದ್ಧಾರ್ಥ— (ಮುಗುಳುನಗೆಯಿಂದ) ಅಲ್ಲ, ಚನ್ನ, ಅಲ್ಲ.

ಚನ್ನ— ಒಂದು ಸಂವತ್ಸರವೆ ?

ಸಿದ್ಧಾರ್ಥ— ಏನೊ, ನಾನರಿಯೆ.

ಚನ್ನ— ಸಿದ್ಧಾರ್ಥ,
ಏನು ನೀನನ್ನುವುದು ! ನಿನ್ನ ಪಯಣದ ಸುದ್ದಿ
ರಾಜರಿಗೆ ಗೊತ್ತೆ ?

ಸಿದ್ಧಾರ್ಥ— ಗೊತ್ತಿಲ್ಲ.

ಚನ್ನ— ಹೇಳದೇ
ಕೇಳದೇ ಓಡುವೆಯ ? ಹೋಗಿ ತಿಳಿಸಲೆ ನಾನು ?

ಸಿದ್ಧಾರ್ಥ—(ಆಜ್ಞಾವಾಣಿಯಿಂದ)
ನಿಲ್ಲು, ಚನ್ನ, ನಿಲ್ಲು ! ಗುಟ್ಟಾದ ಪಯಣವಿದು.
ಗುಟ್ಟಾದ ಪಯಣ ! (ಸ್ವಗತ) ಬಡಪಾಯಿ ಚನ್ನಜ್ಜ,
ಮುಗ್ಧ ಚನ್ನಜ್ಜ, ನನ್ನ ಮನವನ್ನರಿಯ. (ಗಟ್ಟಿಯಾಗಿ)
ಕೇಳಿಲ್ಲಿ, ಚನ್ನಜ್ಜ, ಕೇಳಿಲ್ಲಿ: ನಿನಗೆಲ್ಲ
ವಿಶದವಾಗುಸುರುವೆನು. ಆ ದಿನದ ನೆನಪಿದೆಯೆ ?

ಚನ್ನ— ಯಾವ ದಿನ ?

ಸಿದ್ಧಾರ್ಥ— (ಭಾವದಿಂದ) ಮುದುಕನೊಬ್ಬನ ಕಂಡ ಪುಣ್ಯದಿನ !

ರೋಗಿಯನು ಕಂಡ ದಿನ! ಸತ್ತವನ ಕಂಡ ದಿನ!
ಯೋಗೀಶನೊಬ್ಬನನು ಕಂಡತುಳ ಪುಣ್ಯದಿನ!
ಆ ದಿನದ ನೆನಪಿದೆಯೆ ನಿನಗೆ?

ಚನ್ನ— ಹೌದೊಡೆಯ.

ಸಿದ್ಧಾರ್ಥ— ಅಂದಿನಿಂದಲು ತಾನು ಬುದ್ಧನೆಂದಾಗುವೆನೊ
ಜಗವನೆಂದುಳುಹುವೆನೊ ಎಂದು ಹಂಬಲಿಸು—
ತಿರುವೆ.

ಚನ್ನ— (ಸ್ವಗತ) ಜಾತಕದ ಜೋಯಿಸನು ಅಂತೆಯೇ
ನುಡಿದಿದ್ದ.

ಸಿದ್ಧಾರ್ಥ— ರಾಜ್ಯವನ್ನಗಲುವಾ ದಿನವೇ
ಮದುವೆ ಬಂದೆನ್ನ ನಿಲ್ಲಿಸಿತು.

ಚನ್ನ— ಇಂದು ಸುತನುದಯ
ನಿಲ್ಲಿಸದೆ?

ಸಿದ್ಧಾರ್ಥ— ಇಲ್ಲ, ಎಂದೂ ಇಲ್ಲ. ಚನ್ನ,
ಇಂದು ಜವ ಬಂದರೂ ತಡೆಯಲಾರನು ಎನ್ನ.
ಕೇಳದಿರು ಪ್ರಶ್ನೆಯನು. ಇಷ್ಟು ದಿನ ನಿನ್ನ ನಾ
ಸಲಹಿದೆನು. ನೀನು ಇಂದಿನೊಂದಿರುಳಲ್ಲಿ
ಸಲಹಲಾರೆಯ ಎನ್ನ?

ಚನ್ನ— ನಿನ್ನ ಪ್ರೇಮಕೆ ಸೋತೆ,
ಸಿದ್ಧಾರ್ಥ; ಹೇಳು, ಮಾರ್ನುಡಿಯ ನುಡಿಯದೆಯೆ
ಮಾಡುವೆನು.

ಸಿದ್ಧಾರ್ಥ— ಯಾರಿಗಿದನರುಹದಿರು.

ಚನ್ನ— ಇಲ್ಲ
ನನ್ನೆದೆಗು ನಾ ಹೇಳೆ.

ಸಿದ್ಧಾರ್ಥ— ಇಂದು ನೀನೆನ್ನ
ಕೋಣೆಯೆಡೆ ಮಲಗಿಕೊ. ರಾತ್ರಿ ನಿನ್ನನು ಕರೆವ
ಸಮಯ ಬರಬಹುದು.

ಚನ್ನ— ತಪ್ಪದೇ ಮಲಗುವೆನು.

ಸಿದ್ಧಾರ್ಥ— ವಾದ್ಯಗಳು ನಿಂತಿಹವು. ನನಗಾಗಿ ಕಾಯುವರೊ
ಏನೊ; ಹೋಗುವೆನು. ಮರೆಯದಿರು, ತೊರೆಯದಿರು!
(ತೆರಳುತ್ತಾನೆ.)

ಚನ್ನ— ಸಿದ್ಧಾರ್ಥ, ಗೌತಮಾ, ನಿನ್ನ ಮನವರಿಯೆ.
ಮಿಂಚುಹುಳು ಬಲ್ಲುದೇ ಚಂದ್ರತಾರೆಗಳೇಕೆ
ಬೆಳಗುತಿವೆ ಎಂದು. ಆದರೂ ಮಿಣುಕುವುದು
ಚುಕ್ಕಿಗಳನನುಕರಿಸಿ. ಅಂತೆಯೇ ನಾನೂ.
ಅವನು ತೊಳಗುವನೆಂಬುದನು ಬಲ್ಲೆ. ಏತಕೆಂ
ಬುದನರಿಯೆ. ಆದರಾತನು ಬರಿದೆ ತೊಳಗುವವನ್
ಅಲ್ಲ. ಏನನೋ ಬೆಳಗಲೆಂದೇ ಅವನು
ತೊಳಗುವನು. ಸಿದ್ಧಾರ್ಥ ತೊಳಗಿದರೆ ಬೆಳಗುವನು!
(ಹೋಗುತ್ತಾನೆ.)

ಪರದೆ

## ದೃಶ್ಯ ೨

[ಅರಮನೆಯಲ್ಲಿ ಒಂದು ಕೋಣೆ. ಸಿದ್ಧಾರ್ಥನು ಹಾಸಗೆಯ ಮೇಲೆ ಕುಳಿತಿದ್ದಾನೆ. ದೀಪವೊಂದುರಿಯುತ್ತಿದೆ.]

ಸಿದ್ಧಾರ್ಥ— ಹಿಂಜರಿಯದಿರು, ಮನವೆ. ಕಲ್ಲಾಗು, ಎದೆಯೆ.
ಬೆಣ್ಣೆಯಾಗುವೆ ಮುಂದೆ! ವ್ಯಾಮೋಹವೇ, ಸಾಯಿ!
ವೈರಾಗ್ಯವೇ, ಬಾಯಿ! ಮುಕ್ತಿದೇವತೆ, ತಾಯಿ,
ಬಂದೆನ್ನ ಹೃದಯಕಮಲದಿ ನೃತ್ಯವಾಡು.
ಮಾಯೆಯನು ದೂಡು. ಶಕ್ತಿಯನು ನೀಡು!
(ಎದ್ದು ಕಿಟಕಿಯ ಬಳಿಗೆ ಹೋಗಿ ಹೊರಗೆ ನೋಡಿ)
ಮಲಗಿ. ಕೈವಾರಿಗಳೆ, ಮಲಗಿ. ಏಳದಿರಿ,
ವಾದ್ಯಗಾರರೆ; ನಿದ್ದೆ ದೇವತೆಯೆ, ನಿನ್ನ,
ಮಧುರ ಚುಂಬನವಿಂದು ಮಧುರತರವಾಗಲಿ!
ನಿನ್ನ ಮುತ್ತಿನೊಳಿಂದು ಎಲ್ಲ ಕಣ್ಣೆವೆಗಳನು
ಒತ್ತಿಹಿಡಿ. ಮೌನದೇವತೆಯೆ ಬಾ, ನಿನ್ನ

ಸಾಮ್ರಾಜ್ಯವಾಳು. (ಹಿಂತಿರುಗಿ ಬಂದು ಕುಳಿತು)
ಎಲೆ ಸೆಜ್ಜೆ, ಇದೆ ನಿನ್ನ
ಕಡೆಯ ಸಂದರ್ಶನ! ಇದೆ ಅಂತ್ಯ ಸ್ಪರ್ಶ!
ಇಂದಿಗೇ ಸಾಕು ನೀನೆನಗಿತ್ತ ಹರ್ಷ! (ಹೆಜ್ಜೆಗಳ ಸದ್ದು)
ಪಾದ ರವ! ಪಹರಿ ಇರಬಹುದು. ಇರಲಿ.
ನೋಡುವೆನು. (ಬಾಗಿಲ ತೆರೆದು) ಕೈಲಾಸ!

**ಕೈಲಾಸ—** (ಹೊರಗಿನಿಂದ) ನನ್ನೊಡೆಯ!

**ಸಿದ್ಧಾರ್ಥ—** ಏನಿನ್ನೂ
ಮಲಗಿಲ್ಲ? (ಕೈಲಾಸನ ಪ್ರವೇಶ)

**ಕೈಲಾಸ—** ಇಲ್ಲ, ನನ್ನೊಡೆಯ.

**ಸಿದ್ಧಾರ್ಥ—** ಹೋಗು
ಮಲಗಿಕೊ. ಭಯವೇನೂ ಇಲ್ಲ.

**ಕೈಲಾಸ—** ಕರ್ತವ್ಯ?

**ಸಿದ್ಧಾರ್ಥ—** ಬಹಳ ಬಳಲಿಹೆ ನೀನು. ನನ್ನಾಜ್ಞೆ!
ಹೋಗು ಮಲಗಿಕೊ. (ಹೋಗುವವನನ್ನು ಕುರಿತು)
ಇರು ಸ್ವಲ್ಪ, ಕೈಲಾಸ.

**ಕೈಲಾಸ—** (ಹಿಂತಿರುಗಿ) ಅಪ್ಪಣೆ.

**ಸಿದ್ಧಾರ್ಥ—** ನಿನಗೆಷ್ಟು ವಯಸೀಗ?

**ಕೈಲಾಸ—** ತಮ್ಮ
ತಂದೆ ಪಟ್ಟಕ್ಕೆ ಬಂದಾಗ ನನಗೆಂಟು
ತುಂಬಿತ್ತು.

**ಸಿದ್ಧಾರ್ಥ—** (ಮುಗುಳುನಗೆಯಿಂದ) ನೀನು ಬಹು ಬಡವನಲ್ಲವೆ ಪಹರಿ?

**ಕೈಲಾಸ—** ತಮ್ಮ....ಕೃಪೆಯಿಂದ....

**ಸಿದ್ಧಾರ್ಥ—** ಇರಲಿ ಬಿಡು. ಬಾ ಇಲ್ಲಿ.
ತೊಡವುಗಳು ಬೇಕೇನು ನಿನಗೆ? ದುರುದುರುನೆ
ನೋಡಿತಿಹೆ ಏಕೆ? ಬೇಕೇನು? ಹೇಳು!

**ಕೈಲಾಸ—** ಇಂದು ಒಡೆಯರ ರೀತಿ ಬೇರೆಯಾಗಿಹುದೆಂದು
ಸೋಜಿಗವು ಎನಗೆ.

ಸಿದ್ಧಾರ್ಥ— ಸೋಜಿಗವ ಪಡಬೇಡ,
ಪಹರಿ! ತೆಗೆದುಕೋ. (ತನ್ನ ಆಭರಣಗಳನ್ನು ಕೊಡುತ್ತಾನೆ.)

ಕೈಲಾಸ— (ಹಿಂಜರಿದು) ನನಗೇಕೆ, ನನ್ನೊಡೆಯ,
ಆ ರನ್ನದೊಡವೆಗಳು; ರಾಜರೇನೆಂದಾರು?

ಸಿದ್ಧಾರ್ಥ— ನಾನಿತ್ತೆನೆನು. ಪಹರಿ. ನಾನಿತ್ತೆನೆಂದರುಹು!
ಭಯವೇಕೆ ತೆಗೆದುಕೊ. ಈ ರಾತ್ರಿ ನಿನ್ನ ಮನ
ದೊಳು ಚಿರಸ್ಮರಣೀಯವಾಗಿರಲಿ! (ಕೊಡುತ್ತಾನೆ.)

ಕೈಲಾಸ— (ತೆಗೆದುಕೊಂಡು) ನನ್ನೊಡೆಯ!

ಸಿದ್ಧಾರ್ಥ— ನಿನ್ನೊಡವೆ! (ಮರಳಿ ಮತ್ತೊಂದು ಕೊಡುತ್ತಾನೆ.)

ಕೈಲಾಸ— (ತೆಗೆದುಕೊಂಡು) ನನ್ನೊಡೆಯ!

ಸಿದ್ಧಾರ್ಥ— ನಿನ್ನೊಡವೆ! ತೆಗೆದುಕೊ;
ಮಲಗಿಕೊ, ಹೋಗು, ನನ್ನಿಷ್ಟ.

ಕೈಲಾಸ— ನನ್ನೊಡೆಯ!
(ಅತ್ತ ಬಿಟ್ಟು ಹೋಗುತ್ತಾ ಆತ್ಮಗತ)
ಮುಂದೆ ಏನಾಗುವುದೊ ದೇವರೇ ಬಲ್ಲ.

ಸಿದ್ಧಾರ್ಥ— (ಬಾಗಿಲು ಹಾಕಿ)
ಹೊತ್ತಾಯ್ತು, ಕಾಲಚಕ್ರವೆ, ತಿರುಗು ಮೆಲ್ಲನೆಯೆ
ಇಂದೊಂದು ದಿನ. ಜನ್ನನೆಚ್ಚತ್ತಿಹನೊ? ಇಲ್ಲವೊ?
(ಮತ್ತೊಂದು ಬಾಗಿಲು ತೆರೆದು)
ಎಂತು ಮಲಗಿಹನು! ನಿದ್ದೆಯವನನು ಶಾಂತಿ
ಸಾಗರದೊಳದ್ದಿಹಳು. ಎಲೆ ನಿದ್ದೆ, ಎನಿತು ಮೃದು
ಮಧುರಳಾ ನೀನು. ಸಮತೆಯಿಾಯುವೆ ಜಗದ
ಜೀವಿಗಳಿಗೆಲ್ಲ. ನಿನ್ನ ಗಾಢಾಲಿಂಗ-
ನದೊಳೆಲ್ಲರೂ ಒಂದೆ. ನಿಷ್ಪಕ್ಷಪಾತಳಾ
ನೀನು. ಬಡಕೂಲಿಯಾದೊಡೆಯು, ಮೇಣರಸ-
ನಾದೊಡೆಯು ಭೇದ ತೋರದೆ ನೀನು ಮುತ್ತಿಡುವೆ.
ಯೋಗಿಯಾದನರು ಅಥವ ತಲೆಬಡಿಗನಾದರೂ
ನಿನ್ನ ದಿಟ್ಟಿಯೊಳೆಲ್ಲರೊಂದೆ. ಜಗದೆನಿತು

ಬಳಲಿಕೆಯ, ಕೋಟಲೆಯ ನುಂಗುತಿಹೆ ನೀನು!
ಚನ್ನ— (ಕನವರಿಸಿ) ಬಂದೆ, ನನ್ನೊಡೆಯ. ಬೇಡ, ಬೇಡಾ! ಬೇಡ!
ಸಿದ್ಧಾರ್ಥ— ಕನವರಿಸುತಿಹನು. (ಮೆಲ್ಲಗೆ) ಚನ್ನಜ್ಜ ಚನ್ನಜ್ಜ!!
ಎಲೆ ನಿದ್ದೆ, ನಿನ್ನ ಕಡಲೆನಿತಾಳವಿಹುದು?
(ಮೈಮುಟ್ಟಿ) ಚನ್ನಜ್ಜ! ಚನ್ನಜ್ಜಾ!
ಚನ್ನ— (ಗಾಬರಿಯಿಂದ) ಅಯ್ಯಯ್ಯೊ! ಅಯ್ಯಯ್ಯೊ!
ಏನು ನನ್ನೊಡೆಯ! (ಎದ್ದು ಕಣ್ಣುಜ್ಜಿಕೊಂಡು ಸುತ್ತಲೂ ನೋಡಿ ಸಿದ್ಧಾರ್ಥನನ್ನು ನೋಡುವನು.)
ಸಿದ್ಧಾರ್ಥ— ಬೆದರದಿರು; ನಾನು,
ಸಿದ್ಧಾರ್ಥ.
ಚನ್ನ— ಏನು ನನ್ನೊಡೆಯ?
ಸಿದ್ಧಾರ್ಥ— ಒಳಗೆ ಬಾ.
ಕನಸು ಕಂಡೆಯ ಏನು?
ಚನ್ನ— (ಒಳಗೆ ಬಂದು) ಏನು ಕನಸಪ್ಪಾ!
ದುಃಸ್ವಪ್ನ, ನನ್ನೊಡೆಯ!
ಸಿದ್ಧಾರ್ಥ— ಏನು ಕನಸದು, ಚನ್ನ?
ಚನ್ನ— ನಾಲಗೆಯೆ ಬಾರದೆನಗಷ್ಟು ದುಃಸ್ವಪ್ನ!
ಸಿದ್ಧಾರ್ಥ— ಹೇಳಬಾರದ ಏನಗೆ?
ಚನ್ನ— ಹೇಳಬಾರದ ಸ್ವಪ್ನ!
ಕೇಳಬಾರದ ಸ್ವಪ್ನ!
ಸಿದ್ಧಾರ್ಥ— ಇರಲಿ ಬಿಡು. ಹೋಗಿ
ಕಡಿವಾಣ ಹಾಕದೇ ಕಂಥಕನ ಕರೆದು ತಾ.
ಜತೆಗೆ ಇನ್ನೊಂದು ಹಯವನ್ನು ತಾ.
ಚನ್ನ— ಏತಕ್ಕೆ?
ಸಿದ್ಧಾರ್ಥ— ಆಗಲೇ ಮರೆತೆಯಾ, ಬೈಗಿನಲ್ಲಂದದ್ದು?
ಚನ್ನ— ಏನದು?
ಸಿದ್ಧಾರ್ಥ— (ಸ್ವಗತ) ಸ್ಮೃತಿಕೂಡ ನರೆನವಿರ ಕಂಡೊಡನೆ
ದೂರಾಗುವುದು ಹೇಸಿ. (ಅವನ ತಲೆ ಹಿಡಿದು ಮೆಲ್ಲನೆ ಅಲುಗಿಸಿ)

ಉದುರುದುರು ನೆನಪೆ!
ಈಗ ನೆನಪಾಯ್ತೆ ? (ಮುಗಳ್ನಗೆ)

ಚನ್ನ— ಆಯ್ತಾಯ್ತು.

ಸಿದ್ಧಾರ್ಥ— ನಡೆ ಬೇಗ.
ಅರಮನೆಯ ಪಶ್ಚಿಮದ್ವಾರದೊಳು ಕಾಯುತಿರು.
ಬರುವೆನಲ್ಲಿಗೆ ಬೇಗ.

ಚನ್ನ— (ಕೈಮುಗಿದು) ಅಪ್ಪಣೆ, ನನ್ನೊಡೆಯ.
(ಹೋಗುತ್ತಾನೆ.)

ಸಿದ್ಧಾರ್ಥ— (ದೀಪದ ಬಳಿಸಂದು)
ಬಾ, ಬೆಳಕೆ, ಬಾ ಬೇಗ. ನೀನು ಹೊರಗಿನ ಬೆಳಕು;
ಜ್ಞಾನ ಒಳಗಿನ ಬೆಳಕು. ನೀನಡಿಗಳಿಗೆ ದಾರಿ
ತೋರಿಸುವೆ. ಅರಿವಾದರಾತ್ಮನನು ಕೈಹಿಡಿದು
ನಡೆಸುವುದು. ಎಲೆಲೆ ಹೊರಗಿನ ಬೆಳಕೆ, ಒಳಗಿನಾ
ಬೆಳಕ ಪಡೆಯಲು ಹೋಗುತಿಹೆನು. ನೆರವಾಗು.
ಬಾ ಬೆಳಕೆ, ಬಾ ಬೇಗ. (ದೀಪವಿಡಿದು ಬಾಗಿಲಬಳಿ ಸಂದು)
ಕಡೆಯ ವಂದನೆ ನಿನಗೆ,
ಕೋಣೆಯೆ, ಕಡೆಯ ವಂದನೆ ನಿನಗೆ. ಸವಿಯಾದ
ನೆನಪುಗಳಿಗಾವಾಸವಾಗಿರುವೆ. ಕಡೆಯ ವಂದನೆ
ನಿನಗೆ, ಕೋಣೆಯೆ, ಕಡೆಯ ವಂದನೆ ನಿನಗೆ.
(ಹೋಗಿ ಮತ್ತೆ ಬಂದು)
ಪತ್ರವನು ಬರೆದಿಟ್ಟು ಹೋಗುವೆನು. ನನ್ನಿಂದ
ಅವರಿಗೇಕುದ್ವೇಗ? (ಪತ್ರ ಬರೆದಿಟ್ಟು ದೀಪ ತೆಗೆದುಕೊಂಡು)
ನಡೆಸೆನ್ನ ಬೆಳಕೇ, ನಡೆಸು. ಬೆಳಬೆಳಗಿ ಮುಂದೆ
ಅಡಿಯಿಡಿಸು. ನಂಬಿಹೆನು; ಋಜುಮಾರ್ಗವನೆ ಹಿಡಿಸು!
(ತೆರಳುತ್ತಾನೆ.)

ಪರದೆ.

## ದೃಶ್ಯ ೩

[ಕುದುರೆ ಲಾಯದ ಬಳಿ. ಚನ್ನನು ಬರುತ್ತಾನೆ.]

ಚನ್ನ— ನಾನರಿಯೆ, ನಾನರಿಯೆ, ಇಂದು ಕಡೆಗೇನಾಗುವುದೊ
ಎಂದು. ಅವನಿಂದು ಬರಿಯ ಹುಚ್ಚನಂತಿಹನು.
ಅವನ ಆಣತಿಯನೆಸಗಬೇಕೋ
ಬೇಡವೋ ನಾನರಿಯೆ. ಒಡೆಯನೀ ಪರಿ ಹುಚ್ಚ
ನಾದೊಡೆ ವಿಧೇಯನಾಗಿರಬೇಕೆ? ಅವಿಧೇಯತೆಯೆ
ಅವನ ಭಾಗಕ್ಕೆ ಶುಭವಾಗಬಹುದು;
ಶುಭವಾಗಬಹುದು! ಇರಲಿ, ರಾಲನ ಕರೆವೆ!
(ಬಾಗಿಲ ಬಳಿ ಹೋಗಿ) ರಾಲ! ಏ ರಾಲ! ಏ ರಾಲ! ಏ ರಾಲಾ!
ಕಾಸ್ತಾರರಿವರೂ ಕುದುರೆಗಳೆ! (ಬಾಗಿಲು ತಟ್ಟಿ)
ಏ ರಾಲಾ!
ಏನು ಚಳಿಯಪ್ಪಾ! ಮೈಯೆಲ್ಲಾ ಕೊರೆಯುತಿದೆ.

ರಾಲ— (ಬಂದು) ಯಾರದು? ಈ ರಾತ್ರಿ ಕರೆವವರು?

ಚನ್ನ— ನಾನು!
ಏನು ನಿದ್ದೆಯೊ ನಿನಗೆ! ಊರೆಲ್ಲ ಬೆಂದರೂ
ನೀವುಟ್ಟಗೇಳೆ!

ರಾಲ— ನಾವೇನು ಮಾನುಗಳೆ.
ಕಣ್ಮುಚ್ಚದಾವಾಗಲೂ ನಿಮ್ಮ ಕಾಯುತ್ತ
ಕುಳಿತಿರುವುದಕ್ಕೆ?

ಚನ್ನ— ಮಾತಿರಲಿ, ಬಾ ಇಲ್ಲಿ,
ನಿನ್ನಿಂದ ಈಗೊಂದು ಬಹು ದೊಡ್ಡ ಕಾರ್ಯಸಾ-
ಧನೆಯಾಗಬೇಕು.

ರಾಲ— (ದೊಡ್ಡದಾಗಿ ಕಣ್ಣು ತೆರೆದು) ಏನಪ್ಪಾ!

ಚನ್ನ— ಮಾಡುವೆಯೊ
ಹೇಳು!

ರಾಲ— ಕುದುರೆಗಳು, ಲಾಯಗಳು, ಜೀನುಗಳು,
ಕಡಿವಾಣಗಳನಿನಿತನೊತ್ತಟ್ಟಿಗಿಟ್ಟು

ಉಳಿದಾವ ಕೆಲಸವನ್ನಾದರೂ ಹೇಳು.

ಚನ್ನ— ದೊಡ್ಡ ಗುಟ್ಟದು ನೋಡು. ರಟ್ಟು ಮಾಡಿದರೆ
ತಲೆಹೋಗುವಂತಹುದು.

ರಾಲ— (ದಿಗಿಲು ಬಿದ್ದು) ಹಾಗಾದರದು ಬೇಡ!

ಚನ್ನ— ಒಪ್ಪಿ, ಬೇಡ ಎನ್ನುವೆಯಾ ಈಗ? ಬಾ ಇಲ್ಲಿ! (ಕೈ ಬೀಸುತ್ತಾನೆ.)
ಸಿದ್ಧಾರ್ಥನಿಂದು ಬಹು ದೂರ ಹೊರಟಿಹನು.

ರಾಲ— ಎಲ್ಲಿಗೆ? ಏತಕ್ಕೆ? ಈ ರಾತ್ರಿ! ಅಬ್ಬಬ್ಬ!

ಚನ್ನ- ಸುಮ್ಮನಿರು, ತೆಪ್ಪಗಿರು! ಎಲ್ಲಿಗೆಂಬುದನರಿಯೆ.
ಇಂದಾತನೇಕೋ ವಿಚಿತ್ರನಾಗಿಹನು.

ರಾಲ— ಅದಕ್ಕೆ ನಾನೇನು ಮಾಡುವುದು?

ಚನ್ನ— ಅರಮನೆಯ
ಪಶ್ಚಿಮ ದ್ವಾರಾಭಿಮುಖವಾದ ಬೀದಿಯೊಳು
ನೀನಡಗಿ, ಸಿದ್ಧಾರ್ಥನಲ್ಲಿಗೈತಂದೊಡನೆ
ಅಬ್ಬರಿಸು!

ರಾಲ— ಬಲು ಒಳ್ಳೆಯುಪದೇಶ, ಚನ್ನಯ್ಯ!
ನನ್ನ ಬೆನ್ನಿನ ತೊಗಲಿಗೆಲ್ಲಿ ಹೋಗಲಿ ನಾನು
ಆಮೇಲೆ

ಚನ್ನ— ಹೆದರದಿರು; ನೀನು ಬೊಬ್ಬೆಯಿಡು.
ಬಹುಮಾನ ದೊರಕುವುದು ನಿನಗೆ.

ರಾಲ— (ಬೆರಗಾಗಿ) ನೋಡಲ್ಲಿ!

ಚನ್ನ— ಅವನೆ ಬರುತಿಹನು. ಅರುಗಾಗು, ರಾಲ!

(ಚನ್ನ ರಾಲರು ಅರುಗಾಗುತ್ತಾರೆ. ಸಿದ್ಧಾರ್ಥನು ಬರುತ್ತಾನೆ. ಕೈಲಿ ದೀಪ)

ಸಿದ್ಧಾರ್ಥ— ಒಂದೆ ಸಲ, ಒಂದೆಯೊಂದು ಸಲ! ಹೋಗಿ
ಕಣ್ಣಿನಾಸೆಯ ತಣಿಸಿ ದಣಿಸಿ ಬರುವೆ.
ಹೋಗಬೇಕೇಕೆ? ಕಳ್ಳ ಮನವೇ, ನಿನ್ನ
ತಿರುಳ ನಾ ಕಂಡಿಹೆನು. ಆದರೇನೀ ಎದೆಯು
ಶಾಂತವಾಗದು, ಸುಮ್ಮನಿರದಲ್ಲ! ಎಲೆ ಎದೆಯೆ,
ಆಟಪಾಟಗಳೆನಿತು ನಿನ್ನುದರದೊಳಗಿಹವು?

ಬೆಳಕ ಕಾಣದೆ ಇರುವ ನುಡಿಗಳೆನಿತಡಗಿಹವು?
ಎನಿತು ಪಿಸುಮಾತುಗಳು ಮಲಗಿಹವು ನಿನ್ನಲ್ಲಿ?
ಒಂದೆ ಸಲ, ಒಂದೆಯೊಂದು ಸಲ? ಹೋಗಿ
ಕಣ್ಣಿನಾಸೆಯ ತಣಿಸಿ ದಣಿಸಿ ಬರುವೆ.
ಮತ್ತೊಂದು ಬಯಸದಿಹ ಕಡೆಯ ಮುತ್ತನು ಕೊಟ್ಟು
ಬರುವೆ. ಒಂದೆ ಸಲ! ಒಂದೆ ಸಲ! ಒಂದೆ ಸಲ!
(ತೆರಳುತ್ತಾನೆ. ಚನ್ನ ರಾಲರು ಹೊರಗೆ ಬರುತ್ತಾರೆ.)

ರಾಲ— ದೊರೆಯ ಮಕ್ಕಳೆ ಇವರು?

ಚನ್ನ— ಹೌದೊ, ಎಲೆ ಮೂಢ.

ರಾಲ— ಇದೇತಕಿಂತಿಹರು?

ಚನ್ನ— ಬಹುದೂರ ಹೋಗುವರು.

ರಾಲ— ಲಾಯದಾಣೆಗೂ, ಚನ್ನ, ಹಣವಂತರಿಗೆ ಹುಚ್ಚು.

ಚನ್ನ— ಇರಲಿ, ನೀ ಓಡು: ನಾ ಹೇಳಿದುದ ಮಾತ್ರ
ಬಿಡದೆ ಮಾಡು.

ರಾಲ— ಹೋಗುವೆನು. ದೇವರೇ! (ತೆರಳುತ್ತಾನೆ.)

ಚನ್ನ— ಉನ್ಮತ್ತನಂತಿಹನು. "ಒಂದೆ ಸಲ!" "ಒಂದೆ ಸಲ!"
ಅದರರ್ಥವೇನೋ ನಾನರಿಯೆ; ನಾನರಿಯೆ.
ನನ್ನ ಕೆಲಸವ ನಾನು ಮಾಡುವೆನು. ಪರಮೇಶ,
ನನ್ನೊಡೆಯನಿಂದು ಹೋಗದ ತೆರದಿ ಮಾಡು.
ಪುಣ್ಯಾತ್ಮನಾತನನು ಕೃಪೆಯಿಂದ ಕಾಪಾಡು!
(ಹೊರಡುತ್ತಾನೆ.)

ಪರದೆ

## ದೃಶ್ಯ ೪

[ಹೆರಿಗೆ ಮನೆ. ಯಶೋಧರೆ ಮಂಚದ ಮೇಲೆ ಮಲಗಿದ್ದಾಳೆ. ಶಿಶುವಾದ ರಾಹುಲ ತೊಟ್ಟಿಲಲ್ಲಿ ಇದ್ದಾನೆ. ದೂತಿಯರು ಅಲ್ಲಲ್ಲಿ ಮಲಗಿದ್ದಾರೆ. ಸಿದ್ಧಾರ್ಥನ ಪ್ರವೇಶ. ಕತ್ತಲು, ದೀಪ ಕೈಲಿ.]

ಸಿದ್ಧಾರ್ಥ— ಧೈರ್ಯವೆದೆಯೋ ಧೈರ್ಯ! ವೈರಾಗ್ಯ ದೇವತೆಯೆ,
ಸಲಹೆನ್ನನಿಂದು. ಮೃದುವಾಗು, ಎಲೆ ನೆಲವೆ;

ಜನಿಸಿರುವ ರಾಹುಲನ ಕೆನ್ನೆಯಂದದೋಲೀಗ
ಮಿದುವಾಗು, ಎಲೆ ನೆಲವೆ! ವೈರಾಗ್ಯವಿಡುತಿರುವ
ಹಜ್ಜೆಗಳ ಸಪ್ಪುಳವ ವ್ಯಾಮೋಹವಾಲಿಸದ
ತೆರದಿ; ಭೈರವನ ತಂಬಟೆಯ ರತಿಯಾಲಿಸದ
ತೆರದಿ; ಮುಕ್ತಿದೇವಿಯ ಹೆಜ್ಜೆ ಸಪ್ಪುಳವ
ಮಾಯೆಯಾಲಿಸದಂತೆ; ಶಿವನ ವಾಣಿಯ ಮದನ
ಆಲಿಸದ ತೆರದಿ; ಮಿದುವಾಗು, ಎಲೆ ನೆಲವೆ!
(ಹೆಜ್ಜೆಯಿಡುತ್ತಾ)
ಮಿದುವಾಗು! ಮಿದುವಾಗು! ಮಿದುವಾಗು! ಮಿದುವಾಗು!
ಸದ್ದೇನು?

ದೂತಿ— (ಕನವರಿಸಿ) ಎನಿತು ಮುದ್ದಾಗಿರುವೆ, ರಾಹುಲ!

ಸಿದ್ಧಾರ್ಥ— ಕನವರಿಸು, ಕನವರಿಸು, ಎಲೆ ದೂತಿ! ಕನಸಿನೊಳು
ರಾಹುಲನ ಮುದ್ದುಮೋಹವ ಕಂಡು. (ಹುಡುಕುತ್ತಾ)
ಕತ್ತಲೆಯೆ,
ಎಲ್ಲಿ ಬಚ್ಚಿಟ್ಟಿರುವೆ ರಾಹುಲ ಯಶೋಧರೆಯರ?
ಇಲ್ಲಿಲ್ಲ! ರಾಮಿಯಿದು! ಕೃಷ್ಣೆಯಿದು! ಗಂಗೆಯಿದು!
(ಕಂಡು) ಅಲ್ಲಿಹುದು! ಅಲ್ಲಿಹುದು ಎನ್ನ ಮುದ್ದಿನ ಕೆಂಡ!
ಮುಟ್ಟಲಾರೆನು; ಮುಟ್ಟಿದರೆ ಸುಟ್ಟುಬಿಡುವೆ:
ಮುಟ್ಟದಿರಲಾರೆ: ತನುಮನಗಳೆಲ್ಲವನು
ಮೋಹಿಸುವ ಕಾಂತಿಯಿಂದೆಸೆಯುತಿಹೆ, ಎಲೆ ಕೆಂಡ!
ಇಲ್ಲಿಗೇತಕೆ ಬಂದೆ, ಎಲೆ ಹೃದಯ? ಮತ್ತೇಕೆ
ಬೆದರಿ ಹಿಂಜರಿಯುತಿಹೆ. ತೃಪ್ತಿಯಾಯಿತೆ ನಿನಗೆ?
ಇಲ್ಲ, ಇನ್ನೂ ಇಲ್ಲ. ತೃಪ್ತಿಯಾಗುವುದೆಂದು?
(ದೂತಿಯೊಬ್ಬಳು ಮೈಮುರಿಯುವಳು)
ಒತ್ತಿ ಹಿಡಿ, ಎಲೆ ನಿದ್ರೆ, ಒತ್ತಿ ಹಿಡಿ ದೂತಿಯನು.
ಹೊತ್ತಾಯ್ತು, ಹೃದಯವೆ, ಹೊತ್ತಾಯ್ತು: ಬೇಗ!
(ಯಶೋಧರೆಯ ಮಂಚದ ಬಳಿಗೆ ಓಡಿಹೋಗಿ ನಿಂತು)
ಶಾಂತವಾಗೆಲೆ ಎದೆಯೆ! ತಳಮಳಿಸದಿರು ಮನವೆ!

(ತೊಟ್ಟಿಲನು ನೋಡಿ)
ರಾಹುಲಾ! ಎನ್ನ ಬೆಳಕಿನ ಕಿರಣ! ಹೃದಯವೇ
ಮರುಗದಿರು! (ಹಿಂಜರಿದು ಮತ್ತೆ ಮುಂದಕ್ಕೆ ಬಂದು)
ಒಂದು ಮುತ್ತನು ಸೆಳೆದು ತೆರಳುವೆನು,
ತಂದೆಯೊಲಿದೀಯುವಾ ಮುತ್ತಲ್ಲವಿದು, ಕಂದ;
ಸಂನ್ಯಾಸಿಯೀಯುತಿಹ ನಿಷ್ಕಾಮ ಚುಂಬನ,
ಪರಮಾತ್ಮನೀಯುತಿಹ ಮಂಗಳದ ಮುತ್ತು!
ಹೊತ್ತಾಯ್ತು. (ಮುದ್ದಿಸಲು ಬಗ್ಗಿ ಮತ್ತೆ ಬೆದರಿ ಏಳುವನು)
ಸದ್ದೇನು? (ಸುತ್ತ ನೋಡಿ) ಕಲ್ಪನೆಯ ಸದ್ದು!
ಏಳದಿರು, ಕೂಗದಿರು, ಅಳಬೇಡ, ರಾಹುಲಾ.
ನಿನ್ನಳುವಿನೊಳು ಮಹಾಶಕ್ತಿಯಿಹುದಿಂದು,
ಲೋಕಕದು ಬುದ್ಧನಂ ಮನಬಂದರೀಯುವುದು,
ಮನಬಾರದಿರಲವನನಿರಗೊಡದೆ ಕೀಯುವುದು!
(ಮುತ್ತಿಟ್ಟು)
ಕಡೆಯ ಮುತ್ತಿದು, ಕಂದ, ಮೊದಲ ಮುತ್ತಾದರೂ!
(ಯಶೋಧರೆಯ ಕಡೆಗೆ ತಿರುಗುವನು.)
ನಿದ್ರಿಸು, ಯಶೋಧರಾ, ನಿದ್ರಿಸೆಲೆ ತಾಯಿ;
ಇಂದು ನಾ ನಿನ್ನ ಸುತ, ಪತಿಯಲ್ಲ, ಪತಿಯಲ್ಲ!
ನೀನೆನಗೆ ದೇವತೆ, ನಿನ್ನ ಬಳಿ ನಾ ಸಾರೆ;
ನಿನ್ನ ನಾನಿನ್ನೊಲಿಯೆ; ಭಕ್ತಿಯಿಂ ಪೂಜಿಸುವೆ.
(ಆಲಿಸುತ್ತಾನೆ.)
ಹಾ! ಖುರಪುಟಧ್ವನಿ! ಹೊತ್ತಾಯ್ತು ಹೊತ್ತಾಯ್ತು!
ಬಂದೆ, ಚನ್ನಾ, ಬಂದೆ! ನಿಮಗೆಲ್ಲ ಮಂಗಳಂ!
(ಬಾಗಿಲ ಬಳಿ ಹೋಗಿ)
ಎಲೆ ನಿದ್ದೆ, ನಿನ್ನುದರವತಿ ಕಪ್ಪು.
ನಿನ್ನ ಬಲೆಗೊಳಗಾದವರೆ ಬೆಪ್ಪು.
ನಿನ್ನ ನಿಂದಿಸುವುದೂ ತಪ್ಪು.
ನೀನೀಗ ಸೂತಿಕಾ ಮಂದಿರವನಗಲಿದರೆ,
ಸಗ್ಗ ಹಿಡಿದೊಡೆಯುವುದು!

ಧರೆಯ ಎದೆ ಬಿರಿಯುವುದು!
ಕಂಬನಿಯ ಪೆರ್ದೊರೆಯೆ ಹರಿಯುವುದು!
ಕತ್ತಲೆಯೆ, ಜಗದ ದುಃಖವನೆಲ್ಲ ನುಂಗು!
ಹೊತ್ತಾಯ್ತು! (ಹೋಗುತ್ತಾ)
ನಿಮಗೆಲ್ಲ ಮಂಗಳಂ!

(ಹೋಗುತ್ತಾನೆ.)

ಪರದೆ

## ದೃಶ್ಯ ೫

[ಅರಮನೆಯ ಹೊರಗಡೆ ಸಿದ್ಧಾರ್ಥನ ಪ್ರವೇಶ.]

ಸಿದ್ಧಾರ್ಥ— ಹನಿಯಿಂದ ಸಾಗರಕೆ ಹಾರೆಲೈ ಧೀರಾತ್ಮ!
ಛವಿಯಿಂದ ರವಿಯೊಳೊಂದಾಗೆಲೈ ವೀರಾತ್ಮ!
ಅಣುವಿಂದ ವಿಭುವಾಗು; ಜೀವನಿಂ ದೇವನೊಳ
ಗಾಗು! ನಟ್ಟಿರುಳೆ, ಕಟ್ಟಿರುಳೆ, ಕರೆದುಕೋ
ಎನ್ನ. ಕಪಿಲವಸ್ತುವೆ, ಮಲಗು, ಮಲಗು!
ಚರಮ ವಂದನೆ ನಿನಗೆ. ಅರಮನೆಯೆ, ಮಾಯೆಯಾ
ಸೆರೆಮನೆಯೆ, ಎದೆಯಿಂದ ದೂರ ಸರಿ. ಮಸಣವಾಗು,
ಎಲೆ ಎಡೆಯೆ. ಹಳೆಯ ಸಂಸ್ಕಾರಗಳನೆಲ್ಲ
ಭಸ್ಮಮಾಡುವೆನಲ್ಲಿ; ಶಿವನ ಕುಣಿಸುವೆನಲ್ಲಿ!
ಠಳಠಳನೆ ಪುಡಿಯಾಗಿ, ಮೋಹಬಂಧನಗಳಿರ! (ಬೆಚ್ಚಿ)
ಆದರೇನಿದು ಸದ್ದು! ಯಾರೊ ಬರುವಂತಿಹುದು?

(ಮಾರನು ಬರುತ್ತಾನೆ.)

ನೀನಾರು, ಮಧುರ ರೂಪವೆ?

ಮಾರ— ನಾನು ಮಾರ,
ಸಿದ್ಧಾರ್ಥ, ಮೋಹಿನಿಯ ಹಿರಿಯ ಮಗ. ನಟ್ಟಿರುಳೊಳ್
ಆವೆಡೆಗೆ ಪೊರಮಡುವೆ?

ಸಿದ್ಧಾರ್ಥ— ಬಿತ್ತರದ ಲೋಕಕ್ಕೆ,

ಮಾರ-

ಮಾರ— ಕಪಿಲವಸ್ತುವಿನಗಲ ಸಾಲದೇ
ನಿನಗೆ?

ಸಿದ್ಧಾರ್ಥ— ಸಾಲದೆಲೆ ಮೋಹಿನಿಯ ಮಗನೆ!

ಮಾರ— ಹಾಗಾದರೀ ಧರೆಯು ನಿನಗೀವೆ, ಹಿಂತಿರುಗು,
ಸಿದ್ಧಾರ್ಥ; ಹಿಂತಿರುಗು. ಸರ್ವಸಾಮ್ರಾಜ್ಯಕೆ
ಅಧಿಕಾರಿಯಾಗೆ ಪಟ್ಟಕಟ್ಟುವೆ ನಿನಗೆ.

ಸಿದ್ಧಾರ್ಥ— ಪೊರಮಡುವುದೀ ಭೋಗ ಸಾಮ್ರಾಜ್ಯಕೆ
ಮಾರ, ಮುಕ್ತಿ ಸಾಮ್ರಾಜ್ಯಕೆ! ಬ್ರಹ್ಮಾಂಡ
ದಲ್ಲಿರುವ ಪರಮತಮ ಪದವಿಗಾಗೆಳಸುತಿಹೆ
ಸರ್ವಸೃಷ್ಟಿಯ ಹರ್ಷಕಾಗೆಳಸುತಿಹೆ
ಸರ್ವಜೀವರ ಶಾಂತಿಗಾಗೆಳಸುತಿರುವೆ.
ನನ್ನ ಮುಕ್ತಿಯನೊರ್ಬನೆ ಸಾರೆನೆಂದು ಬಯಸೆ.
ಎಳೆಯೊಳಣುವೊಂದು ಬಂಧನದ ಬಲೆಯೊಳಗೆ
ಸಿಕ್ಕಿ ಗೋಳಿಡುವಲ್ಲಿಪರಿಯಂತ ಮುಕ್ತಿಯಂ
ಬಯಸೆ ನಾ; ಹರ್ಷವಂ ಬಯಸೆ ನಾ; ಶಾಂತಿಯಂ
ಬಯಸೆ ನಾ. ಬರಿದೆ ಮೋಹಿವುದೇಕೆ, ಮಾರ?
ತೊಲಗತ್ತ ತೊಲಗು!



ಮಾರ— ಸಿದ್ಧಾರ್ಥ, ಸ್ವಪ್ನಸ್ಥನ್
ಆಗಿರುವೆ. ಜಾಗ್ರತನ ಮಾತಲ್ಲವೀ ನುಡಿ.
ಬಣಗು ವೇದಾಂತವಿದು. ಜಡರ ಸಿದ್ಧಾಂತವಿದು.
ಮುಕ್ತಿಯೆಂಬುವುದೆಲ್ಲಿ? ಬಡ ಶಾಂತಿಯೆಲ್ಲಿ?
ಮರುಳನಂತಾಡುತಿಹೆ. ಅರಮನೆಯ ಸಿರಿಯ
ತೊರೆದರಸಲುಳಿದ ಸಿರಿ ದೊರಕುವುದೆ? ಹುಸಿಮಾತು.
ಇಹಸುಖವನರಿತಿಹೆವು, ಪರಸುಖವದೆಂತಿಹುದೊ?
ಕರದೊಳಿಹ ರನ್ನವದು ಮಿಗಿಲು ಶರಧಿಯ ಸಿರಿಗೆ!
ಪರಸುಖವ ಪಡೆಯಲೆಂದಿಹಸುಖವ ಬಿಡುವೆಯಾ?
ಜೋಕೆ!

ಸಿದ್ಧಾರ್ಥ— ತೊಲಗತ್ತ! ತೊಲಗತ್ತ, ಮಾರ!

ಯುಕ್ತಿವಚನಗಳಿಂದ ಮರುಳನಾಗುವೆನೆಂದು
ಬಗೆದಿಂತು ಬೋಧಿಪೆಯ? ಯುಕ್ತಿಗಳನೋದಿಹೆನು.
ತರ್ಕ ತಾಂ ಬುದ್ಧಿಯಂ ವಿಚಾರಲರಿಯದು, ಮಾರ!
ಬುದ್ಧಿಯಾಚೆಯ ಮೇಲೆ ಸಿದ್ಧಿಯೂರೆಂದು ತಿಳಿ.

ಮಾರ— ಪ್ರಿಯವಲ್ಲದಿರಬಹುದು ಹಿತವಚನದೌಷಧಿ,
ಸಿದ್ಧಾರ್ಥ. ಆದರೂ ಎಚ್ಚರಿಕೆ! ಎಚ್ಚರಿಕೆ!
ಸ್ವಪ್ನನಿಧಿಯನ್ನರಸಿ ಮರುಳಾಗಬೇಡ!
ಎಚ್ಚರಿಕೆ, ಸಿದ್ಧಾರ್ಥ. ನಿನ್ನ ಹಿತಚಿಂತಕನು
ನಾನು.

ಸಿದ್ಧಾರ್ಥ— ಸ್ವಪ್ನನಿಧಿ ದೊರಕದಿರೆ, ಎಲೆ ಮಾರ,
ಸ್ವಪ್ನನಿಧಿಯನ್ವೇಷಣೆಯೆ ಇಂಪು, ಸುಖಕರ,
ಶಾಂತಿಕರ!

ಮಾರ— ಹೆತ್ತ ತಾಯ್ತಂದೆಗಳಿಗೆಲ್ಲ
ಮೋಸಮಾಡುವೆಯೇನು, ಸಿದ್ಧಾರ್ಥ? ಸೋಮಾರಿ
ನೀನು. ಕರ್ಮಕ್ಕೆ ಭಯಪಟ್ಟು, ಕರ್ತವ್ಯ
ವೆಸಗದಲೆ ಸ್ವಾನಂದಕೆಳಸುತಿಹ ನೀನೆ
ಹೇಡಿ!

ಸಿದ್ಧಾರ್ಥ— ಬೈಯದಿರು, ಮಾರ, ಬೈಯದಿರು.
ಕಡಲಾಗಿ ಹಿಂತಿರುಗಲೆಂದೇ ಹನಿಯಾಗಿ
ಹೊರಟಿಹೆನು. ಹನಿಯೊಂದು ಎಸಿತು ಕೊಳಕೊಡ್ಡಂ
ತೊಳೆಯಬಲ್ಲುದು ಮಾರ?

ಮಾರ— ಕಲ್ಲಿನೆದೆ ನಿನ್ನದೈ,
ಸಿದ್ಧಾರ್ಥ! ಸತಿಯ ಗೋಳಿಗೆ ನೂಂಕಿ, ಕಂಬನಿಯ
ಕರೆಯದೆಯೆ ಓಡುತಿಹೆ, ತಸ್ಕರನ ತೆರದಿ!

ಸಿದ್ಧಾರ್ಥ— ಜಗಕಾಗಿ ಕಣ್ಣೀರ ಸುರಿಸುವೆನು, ಮಾರ,
ಅದಕಾಗಿ ಸತಿಗಾಗಿ ಕಂಬನಿಯ ಕರೆಯೆ.
ಮುಂದೆಪೆಯ ಜೆಣ್ಣೆಯನು ಮಾಡೆ, ಇಂದವನು
ಕಲ್ಲಾಗಿ ಮಾಡಿರುವೆ. ಓ ಮೋಹಿನಿಯ ಮಗನೆ,

ತೊಲಗತ್ತ! ತೊಲಗತ್ತ! (ತೆರಳುತ್ತಾನೆ)

ಮಾರ— ಬಿಡುವೆನೆಂದರಿತಿಹೆಯಾ?
ಎಲೆ ರಾಜಪುತ್ರ, ತುದಿಯವರೆಗೂ ನಿನ್ನನ್
ಅಟ್ಟುವೆನು. ನಿನ್ನಿರವು ಕೆಡುಕೆಮ್ಮ ವಂಶಕ್ಕೆ.
ಕಾಯುವೆನು, ಕಾಯುವೆನು ಎಂದಾದರೊಂದು ದಿನ
ನೀನೆನ್ನ ಬಲೆಗೆ ಬೀಳುವವರೆಗೆ, ಸಿದ್ಧಾರ್ಥ.
ಮಾರನೊಡ್ಡುವ ಬಲೆಗೆ ಬೀಳದವರಪರೂಪ.
ಒಮ್ಮೆ ತಪ್ಪಿದರೂ ಮಹಾತ್ಮರೇ ಹೌದು.
ಅದರಿಂದ ನೀನೂ ಮಹಾತ್ಮನೇ, ಗೌತಮಾ!
ಧರ್ಮಮೋಕ್ಷವೆ ನೀನು; ನಾನು ಕಾಮಾರ್ಥ!

(ಹೊರಡುತ್ತಾನೆ.)

ಪರದೆ

## ದೃಶ್ಯ ೬

[ರಾಜಬೀದಿ, ರಾಲನ ಪ್ರವೇಶ]

ರಾಲ— (ಆಕಳಿಸಿ ಮೈಮುರಿದು)
ಕಾದು ಕಾದೆನಗೆ ಸಾಕಾಯ್ತು. ಏನು ಚಳಿ!
(ಬಲವಾಗಿ ಕಂಬಳಿ ಹೊದೆಯುತ್ತಾ)
ಆ ಇಲಿ! ಹಾಳಿಲಿಗೆ! . . . . ಇಲಿಗಳಿವು ಬಡಜನರ
ಪೀಡಿಸುವುವೇ ಹೊರತು ದೊಡ್ಡವರ ತಂಟೆಗೇ
ಕಾಲಿಡವು. ಏನು ತೂತುಗಳಪ್ಪಾ! ಏ ಚಳಿ,
ಹಾಳು ಚಳಿ ತೂತಿದ್ದ ಕಡೆಯೇ ನುಗ್ಗುತಿದೆ! (ಪುನಃ ಆಕಳಿಸಿ)
ಅವನ ಮಾತೇಕೆ ಕೇಳಿದೆನಪ್ಪಾ; ಈ ಬಂಡಿ
ಹೊಡೆಯುವವರಿಂದ ನಮಗಂತು ಸುಖವಿಲ್ಲ!
ಆ ಚನ್ನಗೇಂ ಮರುಳು! ಅವನ ಕುದುರೆಯ ತಲೆ
ಅವನಿಗಿಲ್ಲ. ಮೇಣವನ ಬುದ್ಧಿಯೋ ಕಂಥಕನ
ಲದ್ದಿ. ಅರಮನೆಯ ಬಿಟ್ಟಾರು ಹೋಗುವರು?
ದೊರೆತನವ ಬಿಟ್ಟಾರು ಹೋಗುವರು? ಕೈಹಿಡಿದ

ಹೆಂಡತಿಯು ಬಿಟ್ಟಾರು ಹೋಗುವರು? ಹೆತ್ತ
ಮಗನ ಬಿಟ್ಟಾರು ಹೋಗುವರು? ಏ ಚನ್ನ,
ಬೆಂದ ಹುರಳಿಯು ಬುದ್ಧಿ ನಿನಗಿಲ್ಲ. ಅರುವತ್ತ-
ಕರೆಮರುಳು! ನಿನಗೀಗ ಎಪ್ಪತ್ತು! ಅಯ್ಯಯ್ಯೋ
ನಿನ್ನ ಮಾತನು ನಂಬಿ ಬಂದ ನಾನೇ ದೊಡ್ಡ
ಮರುಳು! (ಕುಣಿಕುಣಿದು)
ಹಾಳಿರುವೆ, ಕಟ್ಟಿರುವೆ, ಕಾಸ್ತಾರ
ಸೆಂದು ಕಡಿಯುುವೆಯಾ? (ಕೊಂದು)
ಹೋಗು ಯಮಪುರಿಗೆ!
ಕುಕ್ಕರಿಸಿ ಕುಗುರುವೆನು.
(ಕುಳಿತು ತೂಕಡಿಸುತ್ತಾನೆ. ಸಿದ್ಧಾರ್ಥನು ಬರುತ್ತಾನೆ.)

ಸಿದ್ಧಾರ್ಥ— ಪಾಪ, ಚನ್ನನು ಕಾಯ್ದು ಬಳಲಿದನು. ಹೊತ್ತಾಯ್ತು!
(ಮೇಲೆ ನೋಡಿ)
ಚಂದಿರಗೆ ಮಬ್ಬು ಮುಸುಕಿಹುದಿಂದು. ಕತ್ತಲೆಯೆ,
ಯಾರು ಕಾಣದ ತೆರದಿ ನಿನ್ನಾ ಕರಾಳವಹ
ಸೆರಗಿನಿಂದೆನ್ನಂ ಬಿಗಿಬಿಗಿದು ಸುತ್ತು.
(ಮುಂದೆ ಹೋಗಿ ರಾಲನನ್ನು ಎಡವುತ್ತಾನೆ.)

ರಾಲ— (ಬೆಚ್ಚಿಬಿದ್ದೆದ್ದು) ನನ್ನೊಡೆಯ, ನಾನಲ್ಲ: ಚನ್ನನಾಣತಿಯಂತೆ
ಮಾಡಿದೆನು. ತಪ್ಪಾಯ್ತು! ತಪ್ಪಾಯ್ತು! ತಪ್ಪಾಯ್ತು!

ಸಿದ್ಧಾರ್ಥ— ಯಾರಿವನು? ಪಾಪ! ತಪ್ಪಾಯ್ತು! ಅನಾಥನಿರಬೇಕು.
ಕೂಗದಿರು, ಭಿಕ್ಷುಕ. (ಸ್ವಗತ) ಮೋಕ್ಷವಾಗಲಿ ಮಾಯೆ
ಯರಮನೆಯ ಮೆಟ್ಟಲೊಳೆ. (ಗಟ್ಟಿಯಾಗಿ)
ಮನೆಯಿಲ್ಲವೇ ನಿನಗೆ?

ರಾಲ— ಲಾಯದಿಂದೋಡಿಸಿದ, ನನ್ನೊಡೆಯ. ಮಲಗಿದ್ದೆ.
ತಪ್ಪಾಯ್ತು! ದಮ್ಮಯ್ಯ!

ಸಿದ್ಧಾರ್ಥ— ಮಲಗು ನಡೆ, ಹೋಗು.—ಇಗೋ!
(ವಸ್ತ್ರಗಳನ್ನು ಕೊಟ್ಟು ತೆರಳುತ್ತಾನೆ)

ರಾಲ— (ಸಿಟ್ಟುಸಿರು ಬಿಟ್ಟು)

ನಿನ್ನ ಮನೆ ಹಾಳಾಗ! ನೀ ಸತ್ತುಹೋಗ!
ಚನ್ನ, ನನ್ನ ಕೆಲಸದ ಬಾಯ್ಗೆ ಮಣ್ಣಾಗು
ತಿತ್ತಲ್ಲ! ಬದುಕಿದೆಯ ಬಡಜೀವ! ಏ ಚನ್ನ,
ನಿನ್ನ ಮನೆ ಹಾಳಾಗ! ನೀ ಸತ್ತೇ ಹೋಗ!

(ಓಡುತ್ತಾನೆ.)

ಪರದೆ

## ದೃಶ್ಯ ೭

[ಬೀದಿಯ ಮತ್ತೊಂದು ಭಾಗ. ಇಳಿಬೆಳ್ದಿಂಗಳಲ್ಲಿ ಚನ್ನನು ಹಿಂದೆ ಮುಂದೆ ತಿರುಗುತ್ತಿದಾನೆ.]

ಚನ್ನ— (ದೂರ ನೋಡಿ)
ಕುಣಿಯದಿರು, ಕಂಥಕಾ! ಸುಮ್ಮನಿರು, ರಾಹುತಾ!
(ಮತ್ತೆ ಸುತ್ತ ನೋಡಿ)
ಈ ಎಡೆಯೆ ಇರುವಂತೆ ಹೇಳಿದ್ದುದವನು!
ರಾಲನೇನೆಸಗಿದನೊ? ಗುಟ್ಟು ಬಯಲಾಯ್ತೊ?
ಏಕಿನ್ನು ಬರಲಿಲ್ಲ? ಚಂದ್ರನೂ ಶೃಂಗಗಳ
ಚುಂಬಿಸುತ ಮರೆಯಾಗುತಿಹನು. ಇನ್ನೇನು?
ಕಗ್ಗತ್ತಲೆಯೆ ಗತಿ. ಕುಳಿತಿಲ್ಲೆ ಕಾಯುವೆನು.
(ಕುಳಿತುಕೊಳ್ಳುವನು. ಸಿದ್ಧಾರ್ಥನ ಪ್ರವೇಶ)

ಸಿದ್ಧಾರ್ಥ— ಇಂದುವೂ ಮುಳುಗಿದನು! ಚನ್ನನಿರುವುದನರಿಯೆ.
ಕಾದು ಹಿಂತಿರುಗಿದನೋ ಏನೋ?
ಚನ್ನಜ್ಜಾ, ಚನ್ನಜ್ಜಾ! (ಕೂಗುತ್ತಾನೆ)

ಚನ್ನ— ಸಿದ್ಧಾರ್ಥ!

ಸಿದ್ಧಾರ್ಥ— ಎಲ್ಲಿರುವೆ? ಕಗ್ಗತ್ತಲಿದು ಕಣ್ಣ
ತಿವಿಯುತಿದೆ. ಕಂಥಕನ ತಾ ಬೇಗ, ಹೊತ್ತಾಯ್ತು!

ಚನ್ನ— ಸಿದ್ಧಾರ್ಥ, ಕುದುರೆಗಳ ತಂದಿಹೆನು, ಬಾ ಇಗೋ.

ಸಿದ್ಧಾರ್ಥ— ಕಡಿವಾಣ?

ಚನ್ನ— ಬೇಡವೆಂದೆ, ನೀನೆ.

ಸಿದ್ಧಾರ್ಥ— ಹೌದೌದು!
ಮರೆತಿದ್ದೆ. ಹತ್ತು ರಾಹುತನ, ಚನ್ನಜ್ಜ.
ಹತ್ತಿದೆಯ?

ಚನ್ನ— ಹತ್ತಿದೆನು? ನೀನು?

ಸಿದ್ಧಾರ್ಥ— ಹತ್ತಿದೆ.

(ಕುದುರೆಯನ್ನು ಸಂಬೋಧಿಸಿ ನುಡಿಯುತ್ತದೆ ಆತನ ಅಂತರ್ವಾಣಿ.)

ಮುದ್ದು ಹಯವೇ, ಹೊರಡು; ನಡೆ ಮುಂದೆ, ಮುಂದೆ:
ಜಗದ ಬೆಳಕನು ಹೊತ್ತು ಜವದಿಂದ ನಡೆ ಮುಂದೆ.
ತಿರೆಯ ಕತ್ತಲು ತುಂಬಿ ಕಾಳವಾಗಿರಲು
ನಿಶೆಯ ಗರ್ಭವ ಹೊಕ್ಕು ಜಗಕೆ ಬೆಳಕನು ತಂದೆ
ಎಂಬ ಕೀರ್ತಿಯು ನಿನ್ನದಾಗುವುದು: ಎಲೆ ಹಯವೆ,
ನಡೆ ಮುಂದೆ, ಮುಂದೆ. ಬೇಡ ಭೀತಿಯು ನಿನಗೆ.
ಬೆನ್ನಿನೊಳು ಜಗದ ಜ್ಯೋತಿಯು ಕುಳಿತು ತಳಿಸುತಿದೆ.
ನಿಶೆಯ ಗರ್ಭಂಬೊಕ್ಕು ನಡೆ, ಹಯವೆ, ನಡೆ ಮುಂದೆ
ಮುಂದೆ. ಜೀವಜ್ಯೋತಿಯ ಹೊರುವ ಪುಣ್ಯವೊದ
ಗಿದೆ ಇಂದು. ನೀನೆ ಧನ್ಯನು, ಹಯವೆ: ನೀನಿಂದು
ಇಳೆಯ ತಿಮಿರವ ಹರಿವ ಪೊಂಜುಗಾರನು, ತೇಜಿ.
ಜಗದ ಪುಣ್ಯದ ಭಾರ ನಿನ್ನ ಬೆನ್ನಿನಮೇಲೆ.
ಕೋಟಿ ಜೀವರ ಬಿದಿಯು, ಕೋಟಿಯರಸರ ಬಿದಿಯು,
ನಿನ್ನ ಬೆನ್ನಿನೊಳಿಹುದು. ಓಡು, ನಡೆ; ಓಡು, ನಡೆ;
ನಡೆ ಮುಂದೆ, ಹರಿಯೆ! ನಿನ್ನ ನಡೆಯೊಂದರೊಳು,
ಕುಕ್ಕೋಟೆ ಒಂದೊಂದರೊಳಗಿಂದು ಲಕ್ಷಾಂತ
ರಾತ್ಮರಿಗೆ ಸೊದೆಯುಂಟು. ನಿನ್ನಡಿ ಅಂದೊಂದರೊಳು
ತಿರೆಯ ಚರಿತೆಯು ಬಿದ್ದು ಮುಳುಗೆದ್ದು ತೇಲುತಿದೆ.
ಅಮಿತ ಸಂಖ್ಯೆಯ ಜನರ ಪುಣ್ಯ ಭಾರವನಿಂದು
ಹೊತ್ತಿರುವೆ. ಜಗ್ಗದೆಯೆ, ಕುಗ್ಗದೆಯೆ, ನುಗ್ಗಿ ನಡೆ
ಮುಂದೆ. ವಾಜಿಯೇ, ನಡೆ ಮುಂದೆ, ಮುಂದೆ.
ಬಾಳ ಮೋಹವ ಕುಟ್ಟಿ, ದರ್ಪಸಂಪದವಟ್ಟಿ,

ವಿಷಯಸುಖಗಳ ಮೆಟ್ಟಿ, ಸಿರಿಯ ತರಿದಟ್ಟಿ,
ನಡೆ, ಹಯವೆ, ಕಂಥಕನೆ, ನಡೆ ಮುಂದಕೀಗ!
ಎದೆಯ ಕೀಳಾಸೆಗಳನೆಲ್ಲವನು ಸುಟ್ಟು,
ಮನದ ಸಂದೇಹಗಳನೆಲ್ಲವನು ಬಿಟ್ಟು,
ಪರಮಾತ್ಮನಲ್ಲಚಲ ಭಕ್ತಿಯನ್ನಿಟ್ಟು
ವೈರಾಗ್ಯವನು ತೊಟ್ಟು, ಮುಕ್ತಿಯನ್ನುಟ್ಟು
ನಡೆ, ಧೀರ ಕಂಥಕನೆ, ನಡೆ ಮುಂದೆ ಮುಂದೆ;
ಓಡು, ನಡೆ; ಓಡು ನಡೆ; ನಡೆ ಮುಂದೆ, ಮುಂದೆ!

(ತೆರಳುತ್ತಾನೆ)

ಪರದೆ

## ದೃಶ್ಯ ೮

[ಮೇಘಮಂಡಲದಲ್ಲಿ ಯಕ್ಷ ಕಿನ್ನರ ಗಂಧರ್ವರು ಬರುತ್ತಾರೆ.]

ಯಕ್ಷ— ಚೆಲ್ಲು! ಹೂಗಳ ಚೆಲ್ಲು! ಕಿನ್ನರಾ, ನೋಡಲ್ಲಿ
ಅಲ್ಲಿ! ಅನಿಲವೇಗವ ಮಾರಿ ಓಡುತಿವೆ
ಕುದುರೆಗಳು. ಚೆಲ್ಲು, ಹೂಗಳಚೆಲ್ಲು; ಪಥವೆಲ್ಲ
ಮೃದುವಾಗಿ ಖುರಪುಟದ ದನಿಯಾಗದಂತೆ.

ಗಂಧರ್ವ— ಚಿಂತೆಯೋಟವ ಮುಂಚಿ ಸಾಗುತಿವೆ ವಾಜಿಗಳು.

ಕಿನ್ನರ— ಮಿಂಚಿನೋಟವ ನಗುತ ನಗ್ಗುತಿವೆ, ನೋಡು.
ಓಡಿ, ಹಯಗಳೆ, ಓಡಿ. ದೇವದೂತರು ಇಂದು
ನಾವಲ್ಲ, ನೀವು!

ಗಂಧರ್ವ— ಕೆಲಸ ಕೆಟ್ಟಿತು ಈಗ!

ಯಕ್ಷ— ಏನು ಗಂಧರ್ವ?

ಗಂಧರ್ವ— ನೋಡಲ್ಲಿ, ಗಿರಿಯಂತೆ
ನಿಂತಿಹುದು ಕೋಟೆಗಳ ಹೆಬ್ಬಾಗಿಲು!

ಕಿನ್ನರ— ಇನ್ನಾವ ಹಾದಿಯಿಲ್ಲವೆ, ಯಕ್ಷ?

ಯಕ್ಷ— ನಾನರಿಯೆ !
ಕಿನ್ನರ— ಬನ್ನಿ, ಸಾವೆ ತೆರೆಯುವ, ಬನ್ನಿ!
(ತೆರಳುತ್ತಾರೆ.)
ಪರದೆ

## ದೃಶ್ಯ ೯

[ಕಪಿಲವಸ್ತುವಿಗೆ ಬಹುದೂರದಲ್ಲಿ. ಕತ್ತಲು, ಚನ್ನ ಸಿದ್ಧಾರ್ಥರು ಕುದುರೆ ಏರಿ ಬರುತ್ತಾರೆ.]

ಚನ್ನ— ಸಿದ್ಧಾರ್ಥ! ಸಿದ್ಧಾರ್ಥ! ಸಾಕಾಯ್ತು ನನಗೆ!
ತಲೆ ತಿರುಗುತಿದೆ. ಎದೆ ಹಾರುತಿದೆ, ನಿಲ್ಲು.
ಸಿದ್ಧಾರ್ಥ— (ನಿಂತು) ಚನ್ನಜ್ಜ, ಚನ್ನಜ್ಜ, ಏನಾಯ್ತು, ಏನಾಯ್ತು ?
ಚನ್ನ— ನನ್ನೊಡೆಯ, ಸ್ವಲ್ಪ ವಿಶ್ರಮಿಸಿ ಹೋಂಡೋಣ!
ನೀನು ತರುಣನು, ಒಡೆಯ, ನಾನು ನರೆತವನಪ್ಪಾ!
ಸಿದ್ಧಾರ್ಥ— (ಹತ್ತಿರ ಬಂದು) ಕುದುರೆಯಿಂದಿಳಿ ಕೆಳಗೆ, ಚನ್ನಜ್ಜ!
ಚನ್ನ— (ಇಳಿಯುತ್ತ) ಸಿದ್ಧಾರ್ಥ,
ಏನೋಟವಪ್ಪಾ ಏನೋಟ! ದೇಹವೇ
ನುಗ್ಗುನುರಿಯಾಗುತಿದೆ.
ಸಿದ್ಧಾರ್ಥ— (ತಾನೂ ಇಳಿದು) ಕುಳಿತುಕೊ, ಚನ್ನಜ್ಜ;
ಗಾಳಿಬೀಸುವೆನು. (ಗಾಳಿ ಬೀಸುತ್ತಾನೆ.)
ಚನ್ನ— ಅಪ್ಪಪ್ಪ! ಅಬ್ಬಬ್ಬಾ!
ಸಿದ್ಧಾರ್ಥ— ದೂರವೆನಿತಾಯಿತ್ತೀಗ, ಚನ್ನಜ್ಜ, ಪಟ್ಟಣವ
ಬಿಟ್ಟು?
ಚನ್ನ— ಹದಿನಾರು ಯೋಜನಗಳಾದುವೈ,
ಗೌತಮಾ!
ಸಿದ್ಧಾರ್ಥ— ಈಗ ನಾವೆಲ್ಲಿಹೆವು?
ಚನ್ನ— ಕೋಲಿ ದೇಶವ ದಾಟಿ ಬಂದಿಹೆವು.
ಸಿದ್ಧಾರ್ಥ— ಉದಯವೆಮ್ಮನು ಅನುವಮಾ ತರಂಗಿಣಿಯ
ತೀರದಲ್ಲೆದುರುಗೊಳಬೇಕಜ್ಜಾ. ಹೊರಡೋಣ.

ಚನ್ನ— ಗಳಿಗೆಯೊಂದಿಲ್ಲಿದ್ದು ಹೊಡೋಣ.

ಸಿದ್ಧಾರ್ಥ— ನಿನ್ನಾಸೆ!

ಚನ್ನ— ಮಲಗಿಕೊಳ್ಳುವೆನಯ್ಯ, ಸಿದ್ಧಾರ್ಥ.

ಸಿದ್ಧಾರ್ಥ— ಮಲಗಿಕೋ,
ಚನ್ನಜ್ಜ. (ಚನ್ನನು ಮಲಗಿ ನಿದ್ರಿಸುತ್ತಾನೆ.)
ಮಲಗು, ಮುದುಕಾ, ಮಲಗು.
ನೀನಿನ್ನು ನನ್ನೊಡನೆ ಬರಲಾರೆ. ಹೋಗು,
ಕಪಿಲವಸ್ತುವಿಗೆಲ್ಲ ಸಿದ್ಧಾರ್ಥನೀ ಕತೆಯ
ಹೇಳು. ಶಾಕ್ಯಜನರಿಗೆ ಸೈಪನೊರೆ, ಹೋಗು.
ನಾನಿನ್ನು ಲೋಕದ ಮಹಾಂಬುಧಿಗೆ. ನೀ ಬೀಳ-
ಲಾರೆ ಎನ್ನೊಡನೆ. ನೀನೆನ್ನನಗಲುವುದು
ಬಹು ಕಷ್ಟ. ತಂದೆಯಂತೊಲಿದಿರುವೆ ಎನ್ನ.
ಸರ್ವದಾ ಭಕ್ತಿಯಿಂ ಸೇವಿಸಿದೆ, ಚನ್ನ. (ಕೊಡುತ್ತಾ)
ತೆಗೆದುಕೋ ಈ ನನ್ನ ಒಡವೆಗಳ. ತೆಗೆದುಕೋ
ನಿನಗಾಗಿ ತಂದ ಈ ರನ್ನಗಳ; ತೆಗದುಕೋ
ವಸನಗಳ; ತೆಗೆದುಕೋ ಈ ಎನ್ನ ಹೃದಯವನು.
ನೀನೇಳುವಲ್ಲಿಪರಿಯಂತ ನಾನಡಗಿ,
ಮೇಲೆ ದಾರಿಯ ಹಿಡಿವೆ. ಎಲ್ಲಕೂ ಮಿಗಿಲಾಗಿ
ನಿನ್ನನೊಲಿದಿದ್ದೆ, ಚನ್ನಜ್ಜಾ. ಸೂತಿಕಾಗೃಹದಿಂದ
ನಾನಿನಿತು ಶೋಕದಿಂ ಪೊರಮಟ್ಟು ಬರಲಿಲ್ಲ.
ಎಂದಾದರೊಂದು ದಿನ ಬಂದು ಕಾಣುವೆ ನಿನ್ನ;
ಹೋಗಿ ಬರುವೆನು, ಚನ್ನ; ನಿನಗೆ ಮಂಗಳಮಕ್ಕೆ!
(ಕುದುರೆಯೊಡನೆ ಹೊರಡುತ್ತಾನೆ.)

ಚನ್ನ— (ತುಸುಹೊತ್ತಿನಮೇಲೆ ಎದ್ದು)
ಸಿದ್ಧಾರ್ಥ, ಹೊತ್ತಾಯ್ತು, ಹೊರಡೋಣ, ಏಳು;
ನಿನಗು ನಿದ್ದೆಯೆ, ಒಡೆಯ? ಸಿದ್ಧಾರ್ಥ, ಸಿದ್ಧಾರ್ಥ!
(ಹುಡುಕಿ)
ಸಿದ್ಧಾರ್ಥ, ಎಲ್ಲಿರುವೆ? ನನ್ನೊಡೆಯ, ಎಲ್ಲಿರುವೆ?

ಆರೆದಾರಿಯಲ್ಲಿನ್ನ ಕೊರಳ ಕೊಯ್ಯುವೆಯೇನು ?
ಮಲಗಿದವನನ್ನಿಂತು ಬಿಟ್ಟೋಡುವುದೆ ನೀನು ?
'ನಾ ನಿನ್ನ ಬಿಡಲಾರೆ' ಎಂದ ನುಡಿ ಏನಾಯ್ತು ?
ಏನು ಮಾಡಲಿ ನಾನು ? ಎತ್ತ ಹೋಗಲಿ ಇನ್ನು ?
ಕಪಿಲವಸ್ತುವಿಗೆಂತು ತೆರಳಿ ಮೊಗದೋರಲಿ ?
ಶುದ್ಧೋದನನಿಗೆಂತು ಮೋರೆ ತೋರಿಸಲಿನ್ನು ?
ಹಾ ವಿಧಿಯೆ, ಕೊರಳ ಕೊಯ್ದೆಯ ಎನ್ನ ? (ಕೆಳಗೆ ನೋಡಿ)
ಸಿದ್ಧಾರ್ಥ,
ಸಾಯುವವಗೇತಕೀ ಒಡವೆಗಳು ? ಎನ್ನೊಲವಿಗಿವು
ಹೊಣೆಯೆ ? ತೊಲಗು ತೊಲಗಲೆ ಸಿರಿಯೆ !
[ಆಭರಣಗಳನ್ನು ಒದೆಯುತ್ತಾನೆ.] ತಪ್ಪಾಯ್ತು
ಮನ್ನಿಸೆನ್ನನು, ಒಡೆಯ. ನೀನಿತ್ತ ವಸ್ತುಗಳ
ಒದೆಯುವನು ಮೂಢ. (ಅವುಗಳನ್ನು ತೆಗೆದುಕೊಂಡು)
ಎಲೆ ರನ್ನದೊಡವೆಗಳೆ.
ಬೆಲೆಗಾಗಿ ನಿಮ್ಮ ನಾನೆಂದಿಗೂ ಮುಟ್ಟೆ :
ನನ್ನೊಡೆಯನೊಲವಿಂದ ಕೊಟ್ಟ ವರಗಳು ನೀವು.
ನೀವವನ ಸುಸ್ಮೃತಿಯ ಕಿಂಕರರು, ಬನ್ನಿ.
ಬಾ, ರಾಹುತ, ಬೇಗ ಕಪಿಲವಸ್ತುವ ಸೇರಿ,
ಸುದ್ದಿಯನು ಸಾರಿ, ಧನ್ಯರಾಗುವ ಬಾ.
(ಹಿಂತಿರುಗಿ ದಿಟ್ಟಿಸಿ ನೋಡಿ)
ಕಂಥಕನೆ, ನೀನೆ ಧನ್ಯನು, ನಿನ್ನದೇ ಪುಣ್ಯ !
ನಿನ್ನ ಜನ್ಮವನಿಂದು ಕರುಬುವನು ಚನ್ನ !
(ತೆರಳುತ್ತಾನೆ.)
ಪರದೆ

## ದೃಶ್ಯ ೧೦

[ಅನುವಾ ಹೊಳೆಯ ದಡ, ಸಿದ್ಧಾರ್ಥನ ಪ್ರವೇಶ.]

ಸಿದ್ಧಾರ್ಥ— ನಿಲ್ಲಿಲ್ಲಿ, ಕಂಥಕಾ, ನಿಲ್ಲಿಲ್ಲಿ. ಅನುವಾ
ತರಂಗಿಣಿಯ ನಿರ್ಮಲ ಸುವಾರಿಗಳನೀಂಟು.
ವೈರಾಗ್ಯಯಜ್ಞಕ್ಕೆ ಬಲಿಯಾಗಲೆಂದುಳಿದ
ಕಡೆಯ ಸಂಗವು ನೀನು. ಸತಿಸುತರ ಮೋಹ ಬಂಧನ
ಕಠಿನ. ಕಷ್ಟವಾಯ್ತೆನಗದರ ಖಂಡಿಪುದು.
ಚನ್ನ ಸಂಗದ ಮೋಹ ಬಂಧನವೊ ಕಠಿನತರಃ
ಎನಗದನು ಹರಿಯುವುದು ಕಷ್ಟತರವಾಯ್ತು.
ಕಂಥಕನ ಸಂಗವಿದು ಕಠಿನತಮ, ಮೇಣಿದನು
ಖಂಡಿಪುದು ಕಷ್ಟತಮ. ಅವರೆಲ್ಲ ಮಾನವರು,
ನೀನು ಪಶು, ಕಂಥಕಾ ! ಅದಕಾಗಿ ಎನ್ನೆದೆ
ಕುದಿಯುತಿದೆ. ಹಿಂದೆಂದು, ಹಿಂದಾರು, ಎಂದೆಂದು
ಸಾಧಿಸದ ಸಾಹಸವನೆಸಗಿರುವೆ, ಕಂಥಕನೆ ;
ಅದರಿಂದ ಧನ್ಯನಾಗಿಹೆ, ಹೋಗು, ಸೇರು
ಕಪಿಲವಸ್ತುವ ಬೇಗ. ಎನ್ನವರು ಬಂದು
ಕೇಳುವರು ನಿನ್ನ. ತಲೆದೂಗಿ ಸುಮ್ಮನಿರು—
ತಲೆಯನೇತಕೆ ತೂಗುತಿಹೆ ಇಂತು ? ನೀನೆನ್ನ
ಅರಿಯುವೆಯಾ ? ಹೋಗು, ಕಂಥಕ, ಹೋಗು.
ನೋಡಲ್ಲಿ :
ಪೂರ್ವದಿಗ್ವಧುವಿನೊಡಗೂಡಿ ಉಷೆ ನಲಿಯುವಳು.
ಹೋಗು, ಎಲ್ಲಿಯೂ ನಿಲ್ಲದೆಯೆ ಹೋಗು.
ನೀನು ಕಣ್ಮರೆಯಾಗುವಲ್ಲಿಪರಿಯಂತವೂ
ಕಣ್ಬಣಿಯೆ ನೋಡುವೆನು : (ನೋಡುತ್ತಾ ನಿಂತು, ನಿಟ್ಟುಸಿರೆಳೆದು)
ಪಾಪ ಬಡಜಂತು.
ಏನ ಚಿಂತಿಸಿ ತೆರಳಿತೋ, ತಿಳಿಯೆ. ಬಾ ಉದಯ,
ಬಾ ; ಇಳೆಗೆ ಬೆಳಕ ತಾ. (ತಿರುಗಿ) ಯಾರಿವನು ಮರದಲ್ಲಿ ?
ಬಾ ಇಲ್ಲಿ, ಸೋದರನೆ. (ತಿರುಕ ಬರುತ್ತಾನೆ.)

ಬಡವಸ್ತ್ರಗಳ ನೀಡು,
ಸಿರಿಯ ಕೇತನಗಳಿವು ತೆಗೆದುಕೋ; ನೋಡು.

ಭಿಕ್ಷುಕ— ಮಹಾತ್ಮಾ, ನೀನಾರು?

ಸಿದ್ಧಾರ್ಥ— ಅದನರಿಯೆ ಹೊರಟಿಹೆನು.

(ಬಟ್ಟೆಗಳನ್ನು ಬದಲಾಯಿಸುತ್ತಾರೆ.)

ನೀನೀಗ ರಾಜನಂತೆಸೆಯುತಿಹೆ, ಸೋದರನೆ.
ಬೇಡುವವರಲ್ಲೆನಿತು ರಾಜರುಗಳಿಲ್ಲ,
ರಾಜರಲ್ಲೆನಿತು ಭಿಕ್ಷುಕರಿಲ್ಲ! ಬೇಡುವವ
ರಲ್ಲೆನಿತು ನೀಡುವವರಿಲ್ಲ! ನೀಡುವವ
ರಲ್ಲೆನಿತು ಬೇಡುವವರಿಲ್ಲ! ತೆರಳು, ನಲಿ,
ಸೋದರನೆ. ನಿನ್ನ ನಲ್ಮೆಯೆ ನನ್ನ ನಲ್ಮೆ. (ತೆರಳುತ್ತಾನೆ.)

ಭಿಕ್ಷುಕ— ಶಿವನ ಬಟ್ಟೆಯನುಟ್ಟ ನೀನೆ ಧನ್ಯನು ಇಂದು,
ಸಿದ್ಧಾರ್ಥ, ಶಿವವಾದೆ ಮುಂದೆ ಎಂದೆಂದೂ!

(ಹೋಗುತ್ತಾನೆ.)

(ಪರದೆ)

## ಉಪಸಂಹಾರ ದೃಶ್ಯ

[ಬಾಂದಳದ ನಡುವೆ, ಮುಗಿಲ ತೇರಿನಲ್ಲಿ ಯಕ್ಷ ಕಿನ್ನರ ಗಂಧರ್ವರು ಕುಳಿ ದ್ದಾರೆ.]

ಗಂಧರ್ವ— ಏಳು, ಮೇಲೇಳು, ಎಲೆ ಮೇಘರಥವೇ!

ಕಿನ್ನರ— ದಾರಿ ಬಿಡು, ದಾರಿ ಬಿಡು ಎಲೆ ವಾಯುಪಥವೆ!

ಯಕ್ಷ— ನಾವು ಮೇಲೇರುತಿರೆ, ರಮಣೀಯವಾಗುತ್ತ-
ಲಿಹುದು ಇರೆ.

ಗಂಧರ್ವ— ಗಿರಿಶೃಂಗ ಹಳ್ಳಕೊಳ್ಳಗಳೆಲ್ಲ
ಸಮತೆಯನ್ನೈದುತಿವೆ.

ಕಿನ್ನರ— ಹಿಮಗಿರಿಗೆ! ಹಿಮಗಿರಿಗೆ!
ಎಲೆ ಮೇಘರಥವೇ!

ಯಕ್ಷ— ಕಳೆದ ರಾತ್ರಿಯ ತೆರದ
ರಾತ್ರಿಯನು ಕಂಡಿಲ್ಲ.

ಗಂಧರ್ವ— ಅದು ಮಹಾರಾತ್ರಿ !
ಕಿನ್ನರ— ನೋಡಲ್ಲಿ : ರವಿಯುದಯ, ಪೂರ್ವಗಿರಿ ಶಿಖರದೊಳ್.
ಯಕ್ಷ— ನೋಡಲ್ಲಿ : ಮತ್ತೊಂದು ರವಿಯುದಯವೆಸೆದಿಹುದು :
ಕತ್ತಲಂದದ ಕೂದಲನು ಕತ್ತರಿಸುತಿಹುದು
ಅನುಮಾ ನದಿಯ ತೀರದರೆಯಲ್ಲಿ, ಅಮಲತರ.
ಕಿನ್ನರ— ರವಿಯಿಬ್ಬರೊಂದುದಯ :
ಹಳೆಯ ಸೂರ್ಯನು ಉದಯಗಿರಿ ಶಿಖರದಲ್ಲಿ.
ಹೊಸ ನೇಸರ್ ಅನುಮಾತರಂಗಿಣಿಯ ತೀರದರೆಯಲ್ಲಿ.
ಗಂಧರ್ವ— ಹಳೆಯ ರವಿ
ದಿನಪ.
ಯಕ್ಷ— ಹೊಸ ರವಿಯು ಜನಪ. ನೋಡಲ್ಲಿ :
ಮರ್ತ್ಯನಯನಂಗಳಿಗೆ ಕಾಣದಿಹ ಅಧಿಕಾರ
ಮಕುಟವದು ಎಂತು ಶೋಭಿಪುದಲ್ಲಿ ಮೂಜಗದ
ಕತ್ತಲನ್ನೋಡಿಸುವ ತೆರದಿ.
ಗಂಧರ್ವ— ಸಿದ್ಧಾರ್ಥನ್
ಇನ್ನಾವಗಂ ಬುದ್ಧ !
ಕಿನ್ನರ— ಮುಂದಾಗುವನು ಸಿದ್ಧ !
ಯಕ್ಷ— ಹಿಮಗಿರಿ, ಹಿಮಗಿರಿ, ನಿಲ್ಲೆಲೈ ಮೇಘ !
ಗಂಧರ್ವ— ಬನ್ನಿ, ನಮ್ಮೂರ ಸೇರುವಂ ಬೇಗ.
ಕಿನ್ನರ— ಬುದ್ಧದೇವನ ಪರಮ ತ್ಯಾಗವೆ ಮಹಾತ್ಯಾಗ !
ಯಕ್ಷ— ಧನ್ಯಂ ಮಹಾರಾತ್ರಿ !
ಕಿನ್ನರ— ಲೋಕಕಾಗಲಿ ಮೈತ್ರಿ !

(ತೆರಳುತ್ತಾರೆ.)

ಪರದೆ

# ಶ್ಮಶಾನ ಕುರುಕ್ಷೇತ್ರಂ

[ಇದೊಂದು ಪ್ರತಿಮಾಸೃಷ್ಟಿ. ಯುದ್ಧದ ದುರಂತತೆ, ಅನ್ಯಾಯ. ಕ್ರೌರ್ಯ
ವಿನಾಶನ, ಅವಿವೇಕ, ದುರ್ಲಂಘ್ಯ ವಿಧಿ, ಸರ್ವ ವಿಫಲತೆ, ಸಂಸ್ಕೃತಿಯ ಸಾವು—
ಇದಕ್ಕೆ ಪ್ರತಿಮೆ. ಒಂದೊಂದು ಯುದ್ಧವೂ ಪ್ರಾರಂಭವಾಗುವಾಗ ಅದು ಯುದ್ಧ
ವನ್ನೆ ಕೊನೆಗಾಣಿಸುವ ಜಗತ್ತಿನ ಕೊನೆಯ ಅನಿವಾರ್ಯ ಸಂಕಟವೆಂದು ಸಾರುತ್ತೇವೆ
ಅನ್ಯಾಯವೆಲ್ಲ ತೊಲಗಿ ನ್ಯಾಯಸ್ಥಾಪನೆಯಾಗುವುದೆಂದು ಭಾವಿಸುತ್ತೇವೆ, ಕಲಿ
ಹೋಗಿ ಕೃತಯುಗ ಪ್ರಾರಂಭವಾಗುತ್ತದೆಂದು. ಆದರೆ? ಮತ್ತೆ! ವಿಶೇಷತ
ಗಾಗಿ ಸಾಮಾನ್ಯರ ಅಹುತಿ. ಸಂಸ್ಕೃತಿ ನಾಗರಿಕತೆ ಪ್ರಗತಿ ಎಲ್ಲ ಶ್ಮಶಾನರುದ್ರನ
ಮೆಯ್ಗೆ ಭಸ್ಮಲೇಪನವಾಗುತ್ತದೆ. ಸರಿ, ಪುನಸ್ಸೃಷ್ಟಿಯ ಪ್ರಾರಂಭ, ನಾಟಕಾ
ರಂಭ: ವಿಶ್ವಲೀಲೆ ಸಾಗುತ್ತದೆ.]

## ಪಾತ್ರಗಳು

[ಕೃಷ್ಣ, ರುದ್ರ, ಧರ್ಮರಾಯ, ಭೀಮ, ಅರ್ಜುನ, ಸಹದೇವ, ಕುಂತಿ,
ದ್ರೌಪದಿ, ಮಾತೆ, ಕಂದ, ಕೌರವ, ಧೃತರಾಷ್ಟ್ರ, ವಿದುರ, ಸಂಜಯ, ಅಶ್ವತ್ಥಾಮ,
ಗಾಂಧಾರಿ, ಭಾನುಮತಿ, ಗೀರ್ವಾಣ, ನೀಲಾಕ್ಷ, ಚಾಣೂರ, ಮುದುಕಿ, ಕಲಿ,
ದ್ವಾಪರ, ಮರುಳುಗಳು ಮತ್ತು ಬಂಧುಗಳು, ಪರಿವಾರದವರು, ಸೈನಿಕರು,
ಸಖಿಯರು—ಇತ್ಯಾದಿ.]

## ದೃಶ್ಯ ೧ —

[ಹದಿನೆಂಟು ದಿನಗಳು ರಣಕೋಲಾಹಲದಿಂದ ತುಂಬಿ ತುಳುಕಿದ ಮಹಾ
ಭಾರತ ಸಂಗ್ರಾಮವು ಸಂಪೂರ್ಣವಾಗಿ ಕೊನೆಗಂಡ ದಿನದ ಘೋರ ವಿಷಣ್ಣ ರಾತ್ರಿ
ಅಹುವರೆಗೂ ರಣರಂಗವಾಗಿದ್ದ ಕುರುಕ್ಷೇತ್ರವು ಅಂದು ಭೀಷಣ ಶ್ಮಶಾನಮಾತ್ರ
ವಾಗಿದೆ. ವಿಸ್ತಾರವಾಗಿರುವ ಆ ರಣಭೂಮಿಯ ಬಯಲಿನಲ್ಲಿ ಕಗ್ಗತ್ತಲು ಕವಿದು
ಕೊಂಡಿದೆ. ಕೋಟ್ಯನುಕೋಟಿ ಯೋಧರ ಶವಗಳೂ ಅಸಂಖ್ಯವಾದ ಆನೆ ಕುದುರೆ
ತೇರುಗಳೂ ಮಂದೆಮಂದೆಯಾಗಿ ಮುದ್ದೆಮುದ್ದೆಯಾಗಿ ಅಸ್ತವ್ಯಸ್ತವಾಗಿ ಆ
ವಿಸ್ತರದ ಬಯಲಿನ ತುಂಬ ಬಿದ್ದಿವೆ ಸಾಯುವವರೂ ಗಾಯಪಟ್ಟವರೂ ನರಳ

ತ್ತಿದ್ದಾರೆ. ಇರುಳಿನ ಗರ್ಭದಿಂದ ಹೊರಟ ಆ ರೋದನಧ್ವನಿ ಕುರುಕ್ಷೇತ್ರವನ್ನೆಲ್ಲ ಆವರಿಸಿದೆ. ಆದರೂ ಆ ಗೋಳಿನ ಧ್ವನಿಯನ್ನು ತಿಂದು ತೇಗುವಂತೆ ಯಾವುದೋ ಒಂದು ಭಯಾನಕವಾದ ಮೃತ್ಯುಮೌನವು ಆ ರುದ್ರಪ್ರದೇಶದಲ್ಲಿ ಸುಳಿದಾಡುತ್ತಿದೆ. ಹೆಪ್ಪುಗಟ್ಟಿದಂತಿರುವ ಆ ಕತ್ತಲಲ್ಲಿ, ಆ ವಿಸ್ತಾರವಾದ ಕುರುಕ್ಷೇತ್ರದ ಬಯಲಿನಲ್ಲಿ, ಸಾವಿರಾರು ಅಸ್ಪಷ್ಟ ಆಕೃತಿಗಳು, ಅರೆಮುಸುಗು ಹಾಕಿಕೊಂಡು ಸುಳಿದಾಡುವ ಮನುಷ್ಯವ್ಯಕ್ತಿಗಳು, ಕೈಯಲ್ಲಿ ಸೊಡರು ಹಿಡಿದು ಏನನ್ನೊ ಹುಡುಕುವಂತೆ ಅಲ್ಲಲ್ಲಿ ಚಲಿಸುತ್ತಿವೆ. ಅವರೆಲ್ಲ ಭಾರತಯುದ್ಧದಲ್ಲಿ ಮಡಿದವರ ಬಂಧುಗಳು: ತಂದೆ ತಾಯಂದಿರು, ಅಣ್ಣತಮ್ಮಂದಿರು, ಅಕ್ಕತಂಗಿಯರು, ಸತಿಯರು, ಮಕ್ಕಳು, ಮುದುಕರು. ಕೌರವ ಪಾಂಡವ ಪಕ್ಷದವರು ಅಂದು ಶ್ಮಶಾನದಲ್ಲಿ ಭೇದವಿಲ್ಲದೆ ತಮ್ಮ ತಮ್ಮ ನಂಟರಿಷ್ಟರ ದೇಹಗಳನ್ನು ಅರಸುತ್ತಿದ್ದಾರೆ. ಎತ್ತ ನೋಡಿದರೂ ದುಃಖಮಯವಾದ ರುದ್ರದೃಶ್ಯ. ಆ ದಿನ ಸಾಯಂಕಾಲ ಭೀಮ ದುರ್ಯೋಧನರ ಗದಾಯುದ್ಧವು ಪೂರೈಸಿದೆ. ಕೌರವೇಂದ್ರನು ತೊಡೆಯೊಡೆದು ಮುಡಿಯುಡಿದು ವೈಶಂಪಾಯನ ಸರಸ್ಸಿನ ತೀರದಲ್ಲಿ ನರಳುತ್ತ ಇನ್ನೂ ಜೀವದಿಂದಿದ್ದಾನೆ. ಅದೇ ರಾತ್ರಿ ದ್ವಾಪರಯುಗ ಮುಗಿದು ಕಲಿಯುಗ ಪ್ರಾರಂಭವಾಗುವುದು. ಅಂದಿಗೆ ದ್ವಾಪರಯುಗದ ಶ್ರೇಷ್ಠತಮ ಸಂಸ್ಕೃತಿಯೆಲ್ಲ ವಿನಾಶಹೊಂದಿ ಶ್ಮಶಾನ ಕುರುಕ್ಷೇತ್ರದಲ್ಲಿ ಪರಿಣಮಿಸಿದೆ. ಆ ರಂಗದ ಮಧ್ಯೆ ಧೀರನಾದರೂ ದುಃಖ ಮುಖ ಮುದ್ರೆಯಿಂದ ಕುಗ್ಗಿಹೋದ ಯುಗಪುರುಷ ದ್ವಾಪರನು ಚಿಂತಾಕ್ರಾಂತನಾಗಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಪ್ರವೇಶಿಸುತ್ತಾನೆ. ಎತ್ತರದ ಆಳು; ವೀರವ್ಯಕ್ತಿ. ರಾಜ ವೈಭವದ ಚಿಹ್ನೆಗಳೆಲ್ಲವೂ ಆತನಲ್ಲಿ ತೋರುತ್ತವೆ. ತಲೆಯಮೇಲೆ ಕಿರೀಟವೊಂದಿದೆ. ಒರೆಸೇರಿದ ಕತ್ತಿಯೊಂದು ಸೊಂಟದಲ್ಲಿ ನೇತಾಡುತ್ತಿದೆ. ಆತನನ್ನು ನೋಡಿದರೆ ಏನೊ ಒಂದು ಗೌರವವುಂಟಾಗುತ್ತದೆ. ಮುಖಚಿಹ್ನೆ ವಿಷಣ್ಣವಾಗಿದ್ದರೂ ಅದು ಅಲ್ಪಾತ್ಮನ ಅಧೀರತೆಯ ಖಿನ್ನತೆಯಲ್ಲ; ಅವಿಶ್ರಾಂತ ಪರಾಕ್ರಮಿಯಾದ ಮಹಾ ಪುರುಷನ ಪರಾಭವದ ನಿರ್ಭರತೆಯ ನನ್ನು, ಧೈರ್ಯಭಾವ. ಯುಗಪುರುಷ ದ್ವಾಪರನು ಪ್ರವೇಶಿಸಿ ಬಿಸುಸುಯ್ಯುತ್ತಾನೆ; ಸುತ್ತಲೂ ನೋಡುತ್ತಾನೆ; ಕಂಬನಿಗರೆಯುತ್ತಾನೆ. ಕಡೆಗೆ ನಿಡುಸುಯ್ದು ತನ್ನಲ್ಲಿ ತಾನೆ ಹೇಳಿಕೊಳ್ಳುತ್ತಾನೆ.]

ದ್ವಾಪರ— ಇದೇನಿದೀ ಭಾರತ ಕುರುಕ್ಷೇತ್ರಮಿಾ ದಿನಂ
ಮೂಗುವಟ್ಟಿರ್ಪ ಸುಡುಗಾಡಿನಂತಿರ್ಪುದು?
ನಿಚ್ಚಮುಂ ನಾನಾಲಿಸಿರ್ದ ರಣಕಹಳೆಗಳ
ದೆಸೆದೆಸೆಗಳಂ ತಿವಿವ ದನಿಯಿಲ್ಲ. ಉರವಣಿಪ
ಬೀರರಟ್ಟಹಾಸದ ಕಾಕುಗಳ ಭೀಷಣ
ಸ್ವನವಿಲ್ಲ. ಕಡುಗಿ ಕಾದುವ ಭಟರ ಖಡ್ಗಗಳ

ಸಂಘಟ್ಟನಾ ಧ್ವಾನವಿಲ್ಲ. ಅತಿರಥರ
ಕಲಕಲ ನಿನಾದದಿಂದೊಡಗೂಡಿ ಪೊರವಡುವ
ಕೋದಂಡಪಾಣಿಗಳ ಸಿಂಜಿನಿಯ್ಯು ಟಂಕೃತಿಯ
ನಿರ್ಘೋಷವಿಂದೆತ್ತ ಪೋಗಿಹುದು ? ಕಿಡಿಗರೆವ
ಮಂತ್ರಾಸ್ತ್ರ ಶಸ್ತ್ರಗಳ ರೂಕ್ಷ ದೀಧಿತಿಯೆಲ್ಲಿ ?
ಮುಗಿಲ್ದೆರೆಯನುಜ್ಜಳಿಸಿ ಎಡಬಿಡದೆ ಬಾಂದಳಕೆ
ಚಿಮ್ಮುತಿರ್ದಾ ಸರಲುಗಳ ಸುರಿಮಳೆಯದೆಲ್ಲಿ ?
ಗದೆಯು ಗಾಳಿಯೊಳರಿಗಳೆಂಬುವ ತರಗೆಲೆಯ
ಮೊತ್ತಮಂ ಸುತ್ತಿಸಿದ ವಾಯುಜ ವಾಣಿಯೆಲ್ಲಿ ?
ತನ್ನ ವಾಹಿನಿಯ ವೀರಾಳ್ಗಳನ್ ಹುರುಡಿಸಲ್
ಹುರಿಗೊಳಿಸಿದಾ ಸರ್ಪಕೇತನನ ಹರಿಕಂಠ
ಗರ್ಜನೆಯದೆತ್ತಲಿಂದಡಗಿದುದು ? ಗಾಂಡೀವಮ್
ಏನಾಯ್ತು ? ಕುರುದಳದ ಕೆಚ್ಚೆದೆ ಬಿರಿಯುವಂತೆ
ಮೊಳಗಿದಾ ಪಾಂಚಜನ್ಯವುದೆಲ್ಲಿ ? ಬಿಂಕದಲಿ
ಕೊಂಕು ಕೊರಲಂಗೈದು ಕೆನೆದಾ ತುರಗತತಿಯ
ಹೇಷಾರವಂಗಳಂ ಇಂದಾವ ನೀರವತೆ
ನುಂಗಿದುದು ? ಮೇಗೆತ್ತಿ ಸೊಂಡಿಲ್ಗಳಂ, ಮುಂದೆ
ನುಗ್ಗುತಿರ್ದಾ ಕರಿಯ ಬಲ್ಮೆಯ್ಯ ಗಜಗಳೇನ್
ಮುತ್ತುತಿರ್ಪೀ ಕತ್ತಲೆಯ ಕಡಲಿನಲಿ ಕರಗಿ
ಪೋದುವೇನ್ ?—(ಸ್ವಲ್ಪಹೊತ್ತು ಸುತ್ತ ನೋಡಿ)
ಇಂದನ್ನೆವರೆಗಂ ಕುರುಕ್ಷೇತ್ರಂ
ಅರಸುಗಳ ರಣರಂಗಮಾಗಿತ್ತು ; ಕೊಳೆಯುಲಿಹ
ಪೆಣದ ಬಣಬೆಯ ಕಣವದಾಗಿರ್ಪುದೀ ಪೊಳ್ತು !
ನಿನ್ನೆಯಿದು ಮೆಯ್ಗಲಿಗಳಾಡುಂಬೊಲಾಗಿತ್ತು ;
ಮರುಳ್ಗಳಾಡುತಿಹ ಮಸಣವಾಗಿಹುದಿಂದು !—
ಕಾಳೆಗದ ನೆಲಗಳೆನೆ ಬಿತ್ತರದ ಮಸಣಗಳ್ !
ಕಾಳೆಗವೊ ಬಿತ್ತರದ ಕೊಲೆಗೆಯ್ಮೆ ! ಗೆಲವೆಂದರೇನ್ ?—
ಸೋಲ್ವರ ಸಂತಾಪಂ ; ವಿಜಯಿಗಳ ಪೆರ್ಮೆ !—

(ಚಿಂತಿಸುತ್ತಾನೆ; ಕಣ್ಣು ಮುಚ್ಚಿ ಕಣ್ದೆರೆದು ಬಿಸುಸುಯ್ದು)
ಎನ್ನಾಳ್ವಿಕೆಯ ತುತ್ತತುದಿಯೊಳ್ ವೀರಾತ್ಮರ್
ಎನಿತಳಿದು ಪೋಗಿಹರ್? ಶಿವಶಿವಾ, ಮಸಣವೆನಗೆ
ಈ ಚರಮ ಸೋಪಾನಮಾದುದೆ?—ನೆತ್ತರಲಿ
ಕಾಲ್ದೊಳೆಯುವಂತಾಯ್ತು ತಿರೆಯನಗಲುವ ಮುನ್ನಂ!
ಚಲದಂಕಮಲ್ಲರೆನಿತಳಿದಿಹರ್? ಪುಣ್ಯಾತ್ಮರ್
ಎನಿತಳಿದಿಹರ್? ತರುಣರೆನಿಬರ್ ಮಡಿದಿಹರ್?
ದ್ವಾಪರಯುಗದ ಮಹಾವ್ಯಕ್ತಿಗಳ್: ಆಚಾರ್ಯ
ಭೀಷ್ಮನ್, ಕರ್ಣನ್, ದ್ರೋಣನ್, ಅಭಿಮನ್ಯು
ಮಹಾವೀರರನಿಬರುಂ ಸಮರ ಹುತವಹನಿಂದ
ಬೇಳ್ದ ಕೆಂಗೊಳಿನೊಲ್ ಬೂದಿಯಾಗಿರ್ಪರ್.
ಕೌರವ ಮಹಾನುಭಾವನ್ ಪಗೆಯ ಕೈತವಕೆ
ಸಿಲ್ಕಿ ತೊಡೆಯೊಡೆದು ತನ್ನ ತಿರೆಗುರುಳಿಹನ್!
ಉಕ್ಕೆವದ ಕಾಳೆಗದಿ ಅಳಿವಾಯ್ತು ಕರ್ಣಂಗೆ!
ಬಲಿಯಾದನಾ ದ್ರೋಣನ್ ಅರಸ ಮಗನಾಡಿದಾ
ಮುಗ್ಧಮಿಥ್ಯೆಯಂ ನಂಬಿ!—(ಮೇಲೆ ನೋಡಿ ಭಾವದಿಂದ)
ಇಳಿದು ಬಾ, ಕಳ್ತಲೆಯೆ,
ಬಾನ ಹೊಡೆಯಿಂದಿಳಿದು, ಬಾ, ಮುಸುಕು ಮಸಣಮಂ.
ಕುರುಕುಲಾರ್ಕನ ಚರಮ ದುರವಸ್ಥೆಯಂ ಸಹಿಸಲ್
ಆರದೆಯೆ ಪಡುಗಡಲಿಗಿಳಿದ ಬೆಂಗದಿರನೇ,
ಮರಳಿ ನೀ ಮೂಡದಿರ್! ನಿನ್ನ ಪೊನ್ನೆಳಗಿನಿಂ
ಈ ಭಯಂಕರ ದೃಶ್ಯಮಂ ಮರಳಿ ಬೆಳಗದಿರ್!
ಇನ್ನಿದು ಕುರುಕ್ಷೇತ್ರಮಲ್ತು, ಇಳೆಯ ಬಲ್ಮಸಣಂ!

(ತನ್ನ ಸುತ್ತಲೂ ಎಲ್ಲೆ ತೋರದೆ ಹಬ್ಬಿರುವ ಹೆಮ್ಮಸಣವನು ಎವೆಯಿಕ್ಕದೆ ನೋಡುತ್ತ ದ್ವಾಪರನು ಅಂತರ್ಮುಖಿಯಾಗಿ ನಿಲ್ಲುತ್ತಾನೆ. ಸುಂದರ ಭದ್ರಾಕಾರನಾದ ಕಲಿಪುರುಷನು ಪ್ರವೇಶಿಸಿ ಸುತ್ತಲೂ ದೃಷ್ಟಿಸಿನೋಡಿ ದೂರ ನಿಂತ ದ್ವಾಪರದೇವನನ್ನು ಗುರುತಿಸಿ ಮೆಲ್ಲಮೆಲ್ಲನೆ ಅವನ ಬಳಿ ಸಾರುತ್ತಾನೆ. ಆತನಿಗೆ ತುಸು ಬಳಿಯಲ್ಲಿ ನಿಂತು ಸ್ವಲ್ಪ ಹೊತ್ತು ನಿರೀಕ್ಷಿಸುತ್ತಾನೆ. ದ್ವಾಪರನು ಯಾವುದೋ ವಿಚಾರದಲ್ಲಿ ತಲ್ಲೀನನಾಗಿ

ಬಹಿಃಪ್ರಪಂಚವನ್ನೆ ಮರೆತುಬಿಟ್ಟಿರುವನೆಂದು ತಿಳಿದು ಗಂಭೀರವಾಗಿ ಆತನನ್ನು ಕುರಿತು ಸಂಬೋಧಿಸುತ್ತಾನೆ.)

ಕಲಿ— ದ್ವಾಪರದೇವ !

ದ್ವಾಪರ— (ಅನನ್ಯಚಿತ್ತನಾಗಿ ತನ್ನೊಳು ತಾನೆ)

ಏನ್ ರೌದ್ರಮೋನ್ ಕ್ರೂರಮೋನ್ ದುಃಖಮಯ ದೃಶ್ಯಂ !
ದಿಟ್ಟಿ ಪರಿವನ್ನೆವರಂ ಎತ್ತ ನೋಡಿದೊಡತ್ತ
ನಾಶಮೇ ನಗುತಿಹುದು ವಿಕಟಾಟ್ಟಹಾಸದಿಂ !
ಕಣ್ಣಿಡುವ ಕಡಿ ಮುರಿದ ಪೊಂದೇರುಗಳ ರಾಶಿ ;
ಎತ್ತ ನೋಡಿದಡತ್ತ ಸತ್ತಾನೆಗಳ ಮೊತ್ತ ;
ರುಂಡಗಳ ಚೆಂಡಾಡುತಿಹ ಮರುಳ್ಗಳ ಬಳಗಂ ;
ಜೆನ್ನ ಜೀವಂ ಸಿಗಿವ ಸೃಗಾಲಗಳ ಗುಂಪು !—
ಎನ್ನ ಯುಗದಂತ್ಯದೊಳಿ ವಿಲಯಮಾದಂತಿಹುದು !
(ಚಿಂತಾಮಗ್ನನಾಗಿ ನಿಲ್ಲುತ್ತಾನೆ)

ಕಲಿ— ಆವುದೋ ಎದೆಬಿರಿವ ಚಿಂತೆಯೊಳ್ ಮುಳುಗಿಹನ್.
ಕರೆದರೂ ಎನ್ನ ದನಿ ಕೇಳಿಸದು. ದ್ವಾಪರನ್
ಇಂತು ಚಿಂತಾಕ್ರಾಂತನಾಗಿ ಮೈಮರೆತುದನ್
ಆನಾವಗಂ ಕಂಡುದಿಲ್ಲಂ.—ದ್ವಾಪರದೇವ !

ದ್ವಾಪರ— (ಎರಡು ಹೆಜ್ಜೆ ಮುಂದೆ ನಡೆದು ತನ್ನೊಳು ತಾನೆ)

ಏನಿದೀ ಸದ್ದುಗಳ್ ? ಆರ್ತನಾದಗಳೇನ್ ?
ಮೌನಮೇ ನೋವಿಸಿಂಧೊಯ್ಯೊಮ್ಯನಳುವಂತೆ
ತೋರುತಿದೆ. ಕವಿದಿರ್ಪ ನಟ್ಟಿರುಳಿ ಬಿಸುಸುಯ್ದು
ನರಳುವಂತಿರ್ಪುದು. ಕೈಮುರಿದ ಕಾಲ್ಮುರಿದ
ಹೊಡೆಯೊಡೆದ ತಲೆ ಸಿಡಿದ ನೂರಾರು ಸೈನಿಕರ
ಅಸ್ಪಷ್ಟ ವಾಣಿಗಳ ತುಮುಲ ರೋದನಂ
ಜವನೆದೆ ಬೆದರಿಪಂತೆ ಬಾನ್ಗೇರುತಿಹುದು—
ಹಾ ಕೌರವೇಂದ್ರ ! ಹಾ ಭೀಷ್ಮ ! ಹಾ ದ್ರೋಣ !
ಹಾ ದಿವಾಕರತನಯ ! (ಆಲೋಚಿಸುತ್ತ ನಿಲ್ಲುತ್ತಾನೆ.)

ಕಲಿ— (ಗಟ್ಟಿಯಾಗಿ) ದ್ವಾಪರದೇವ !

ದ್ವಾಪರ— (ತಿರುಗಿನೋಡಿ, ನಿಂತಲ್ಲಿಂದ ಅಲುಗದೆ ಗಂಭೀರವಾಗಿ)
ಕಲಿ ಮಹಾಶಯ!

ಕಲಿ— ಏನಿದಿಂತೊರ್ವನೇ
ನಿಂತು ಚಿಂತಾಮಗ್ನನಾಗಿರ್ಪೆ? ಕರೆದೊಡಂ
ಕೇಳಿಸದು. ಆವ ಮೆಯ್ಯಿಲಿಯೊಡನೆ ನುಡಿಯುತಿಹೆ?

ದ್ವಾಪರ— (ಉಕ್ಕಿಬರುವ ದುಃಖವನ್ನು ತಡೆದು ನೀಳ್ದನಿಯಿಂದ)
ಕಲಿದೇವ, ದ್ವಾಪರನ್ ಕಲಿಯನೀ ಮಸಣದಲಿ
ಎದುರುಗೊಳ್ವಂತಾಯ್ತೆ? ಮುಂದೆ ಬಹ ಯುಗಪುರುಷನ್
ಆಗಲಿಹ ನಿನಗೆ ಈ ಸತ್ತ ಸುಡುಗಾಡಿನಲಿ
ಪಟ್ಟಾಭಿಷೇಕಮಪ್ಪಂತುಟಾಯ್ತೆ? ಎನಿತೆನಿತೊ
ಬರಿಸಗಳ ಗೆಯ್ಮೆಯಿಂ ಗಳಿಸಿರ್ದ ಸಂಸ್ಕೃತಿಯ
ಚೆಲ್ವಿಕೆ ತುತ್ತತುದಿಯಲಿ ಪುಚ್ಚಳಿದು ಪೋಯ್ತೆ?
ನಿನಗೆನ್ನ ಕಾಲಸಾಮ್ರಾಜ್ಯಮಂ ಮರಳೀವ
ಸಮಯದಲಿ, ಆವ ಪೆರ್ಮೆಯೊಳಾವ ಮೆಚ್ಚುಗೆಯ
ವಸ್ತುವನ್ ಎನ್ನಕೃತಿ ಎಂದಾನು ತೋರಿಸಲಿ?
ಈ ಮಹಾಕುರುಕ್ಷೇತ್ರ ಶ್ಮಶಾನಮಂ ತೋರಲೇನ್?
ಅಳಿದ ತುಳಿಲಾಳ್ಗಳ ಶವಂಗಳಂ ನಿನಗಿತ್ತಪೆನೆ?
ಮುರಿದ ಹೊಂದೇರುಗಳ ಮುಂದೆಯುಂ ತೋರ್ದಪೆನೆ?
ನಿನಗಾವ ಮಂಗಳದ ಸಿರಿಯನೀಯಲಿ? ಹೇಳು!

ಕಲಿ— ದ್ವಾಪರದೇವ, ನೀನಿಂತೇಕೆ ಉಮ್ಮಳಂ
ಪಡುತಿರ್ಪೆ? ಶಾಂತನಾಗಯ್. ನೀನಿತ್ತುದಂ
ಸಂತಸದಿ ಕೈಕೊಂಡು ಎನ್ನುಜ್ಜಗಂ ಗೈವೆನ್.
ನಿನ್ನೊಳೂಣೆಯಮೇನ್? ವ್ಯಕ್ತಸೃಷ್ಟಿಯನೆಲ್ಲ
ತನ್ನೊಡಲಿನೊಳ್ ಪೊತ್ತು ಸಲಹಿದಾ ನಿತ್ಯತೆಯೆ
ಮರಳಿಯದನ್ ಅವ್ಯಕ್ತಮನ್ನಾಗಿ ಮಾಡಲ್ಕೆ
ಯುಗಪುರುಷನಾದ ನೀನದಕೇಕೆ ದುಮ್ಮಾನಂ
ಗೊಳ್ಳುತಿಹೆ? ರಸಪೂರ್ಣ ಶೂನ್ಯದಿಂದೊಗೆತಂದುದೀ
ವಿಶ್ವಂ; ಅದರೊಳೆ ವಿಲೀನಮಾಗಡಗುವುದು ತಾನ್.

ಆದೊಡೇನ್ ? ಮರಳಿ ಬೇರೊಂದಾಕೃತಿಯು ತಳೆದು,
ಬೇರೊಂದು ಕಟ್ಟಳೆಗೆ ತಲೆಬಾಗಿ, ಬೇರೊಂದು
ಕಾಲದಲಿ ಮೂಡುವುದು. ಲೀಲೆಯೆಂಬುವುದೆಲ್ಲ
ಮೂಡುವುದು ಮುಳುಗುವುದರಲ್ಲಿಹುದು. ಅದಕೇಕೆ
ಮರುಗುವುದು ? ಕನಸಿನಲಿ ಕಂಡ ಕಡವರಮಳಿಯೆ
ಎಚ್ಚತ್ತು ಶೋಕಿಪುದುಚಿತಮಲ್ತು.

ದ್ವಾಪರ— (ಬಿಸುಸುಯ್ದು, ಕಲಿಯ ಹತ್ತಿರ ಹೋಗಿ ಹೆಗಲಮೇಲೆ ಕೈಯಿಟ್ಟು)
ಕಲಿದೇವ,
ಇಂದಳಿಮುಳಸಿತುಮುಂ ಮುಂದೆ ಐತಂದಪುದೆ ?

ಕಲಿ— ಅಹುದು, ಸಂದೆಯವಿಲ್ಲ.

ದ್ವಾಪರ— (ಸುತ್ತಲೂ ಕೈನೀಡಿ ತಿರುಗಿಸಿ ರಣರಂಗದಲ್ಲಿ ಕೆಡೆದ ವೀರರೆಲ್ಲರನು ನಿರ್ದೇಶಿಸಿ) ಈ ಬೀರರನಿಬರುಂ ?

ಕಲಿ— ಈ ಬೀರರನಿಬರುಂ ?

ದ್ವಾಪರ— ಬಾಂದೊರೆಯ ಕಂದನಹ
ಭೀಷ್ಮನಂತಹ ಬ್ರಹ್ಮಚಾರಿಗಳ್ ?

ಕಲಿ— (ಒಂದು ವಿಧವಾದ ಮೊಂಡ ಕೆಚ್ಚಿನಿಂದ) ಭೀಷ್ಮನನ್
ಮೀರಿದಪರ್ಭೈತಹರ್ !

ದ್ವಾಪರ— ಭೀಷ್ಮನೊಲ್ ಸೂರುಳಂ
ತಪ್ಪದಿಹ ಪಾರ್ಥಿವರ್ ?

ಕಲಿ— ಅದಕೆರಡು ಮಡಿಯುಹರ್
ಜನಿಸುವರ್.

ದ್ವಾಪರ— ದ್ರೋಣನೊಲ್ ಬಿಲ್ಲೋಜರ್ಭೈತಹರೆ ?

ಕಲಿ— (ತಿರಸ್ಕಾರದಿಂದಲೂ ಹೆಮ್ಮೆಯಿಂದಲೂ)
ಕಬ್ಬೊಗೆಯ ಕಾರುವ ಸಿಡಿಲ್ಗಳನೆ ನಿರ್ಮಿಪರ್ ?
ಗ್ರಹ ಚಂದ್ರ ತಾರೆಗಳನಳೆಯುವರ್ ; ತೂಗುವರ್ !

ದ್ವಾಪರ— ಕರ್ಣನಂತಹ ದಾನಿಗಳ್ ಬಹರೆ ?

ಕಲಿ— ಬರದಿರರ್ !

ದ್ವಾಪರ— ಬಿಂಕದಲಿ, ಚಲದಲ್ಲಿ, ಕಡುದಿಟ್ಟತನದಲ್ಲಿ,

ಬಳಲದಿರ್ಪದಟಿನಲಿ, ಪೆಂಪಿನಲಿ, ಪೆರ್ಮೆಯಲಿ,
ಬಲ್ಮೆಯಲಿ, ನೇಹದಲಿ, ಪರಮ ಗಾಂಭೀರ್ಯದಲಿ
ಕೌರವಂಗೆಣೆಯಹ ಮಹಾನುಭಾವರು ಬಹರೆ?

ಕಲಿ— ಅಹುದು ಅದಕೆ ಸಂದೆಯವೇಕೆ?

ದ್ವಾಪರ— (ಸಂತೋಷದಿಂದ) ಧನ್ಯನ್!
ಅವರನಾಳುವ ಪುಣ್ಯವಿಹ ನೀನೆ ಧನ್ಯನ್!
ಆದೊಡಂ, ಕಲಿದೇವ, ನಿನ್ನ ಯುಗದಾಳುಗಳ್
ಕುಬ್ಜರೆಂಬುದು ಶಾಸ್ತ್ರಸಿದ್ಧವಾಗಿರ್ಪುದೈಸೆ?

ಕಲಿ— (ಬಿಂಕದಿಂದ)
ಕುಬ್ಜರಾದೊಡವೇನ್? ದೀರ್ಘದೇಹಿಗಳಪ್ಪ
ತಮ್ಮ ಪೂರ್ವಿಕರ ಭುಜವನಡರುವರೈಸೆ?
ಅದರಿಂದೆ ಪೂರ್ವಯುಗಗಳ ನರರಿಗಿಂತಲುಂ
ಉನ್ನತರ್; ಬಿತ್ತರದ ದಿಟ್ಟಿಯಂ ಪಡೆದವರ್!
ಚಳಿವೆಟ್ಟಗಿಂತಲುಂ ಅದರ ನೆತ್ತಿಯೊಳಿರ್ಪ
ಧವಳಗಿರಿ ಶೃಂಗವೇ ಪಿರಿದಪ್ಪುದೈಸೆ?—
ಸಾವಿನಲಿ ಹೊಸಬಾಳು ಹುದುಗಿಹುದು; ನಾಶದಲಿ
ನವಸೃಷ್ಟಿ ಪವಡಿಸಿದೆ. ನೂರು ಮಾತಿಂದೇನ್?
ಸಾವೆ ಹೊಸಬಾಳಿಗಾಧಾರವಾಗಿರ್ಪುದು.
ನಾಶವೇ ನವಸೃಷ್ಟಿಗುತ್ಸಾಹವಾದಪುದು!

ದ್ವಾಪರ— ಯುಗಗಳೊಳ್ ಕಲಿಯುಗವೆ ಶ್ರೇಷ್ಠವೆಂದೆಂಬೆಯೇನ್?

ಕಲಿ— ಶ್ರೇಷ್ಠವಪ್ಪುದೊ ಅಲ್ತೊ ಅದನ್ ಆನೀಗಳರಿಯೆನ್,
ಉನ್ನತೋನ್ನತವೆಂದು ಕೆಚ್ಚಿನಿಂ ನೆಚ್ಚಿಹೆನ್.
ಪೂರ್ವಯುಗದನುಭವದ ತಳಹದಿಯ ಮೇಲೆಯೇ
ಬರುವ ಕಾಲದ ಭವ್ಯಮಂದಿರವ ನಿರ್ಮಿಪೆನ್.

ದ್ವಾಪರ— (ಹರ್ಷದಿಂದ)
ನವಯುಗದ ನವಚಕ್ರವರ್ತಿ, ಕಲಿದೇವ,
ನಿನಗೆ ಮಂಗಳವಕ್ಕೆ! ಇಂದಿಗೆನ್ನಾಳ್ವಿಕೆ
ತುದಿಯನೈದಿರ್ಪುದು.—ನಾನಿನ್ ತೆರಳ್ದಪೆನ್:

ಕೌರವೇಂದ್ರನ್ ಕಡೆಯುಸಿರನೆಳೆವ ಮುನ್ನಮೇ
ನಾನಾತನನ್ ಕಂಡು ಮಾತಾಡಬೇಕೆಂಬ
ನಿಡುಬಯಕೆಯಿದೆ. ಎನ್ನ ಯುಗದೊಳಾತನೆ ನರನ್
ತನ್ನ ಚಲದಿಂ, ತನ್ನ ಶಕ್ತಿಯಿಂ, ತನ್ನತುಳ
ದೃಢತೆಯಿಂದೆಂತುಟು ಮಹಾಸತ್ವನಹನೆಂಬ
ಸ್ವತ್ವಮಂ ತಿರೆಗೆಲ್ಲ ತೋರಿಹನ್.—ನಿನಗಿದೋ
ಎನ್ನೀ ಕಿರೀಟಮಂ ನೀಡುವೆನ್. (ಕಿರೀಟವನ್ನು ತೊಡಿಸಿ)
ಮೇಣಿದೋ
ರಾಜಕರವಾಲಮಿದೆ! (ಕೊಡುತ್ತಾನೆ)

ಕಲಿ— (ನಮ್ರನಾಗಿ ಸ್ವೀಕರಿಸಿ) ಅಗ್ರಜನೆ, ನಿನಗಿದೋ
ನಮಿಸುವೆನ್. ನಿನ್ನ ಅನುಭವಮೆನಗೆ ಬಟ್ಟೆದೋರಲಿ!

(ಇಬ್ಬರೂ ಒಬ್ಬರನ್ನೊಬ್ಬರು ಪ್ರಶಂಸನೀಯ ದೃಷ್ಟಿಯಿಂದ ನೋಡುತ್ತಾರೆ. ಕಣ್ಣೀರು ತುಂಬಿ ಆಲಿಂಗಿಸುತ್ತಾರೆ. ತರುವಾಯ ದ್ವಾಪರನು ಸುತ್ತಲೂ ತಿರುಗಿ ಶ್ಮಶಾನವನ್ನು ನೋಡಿ ನಿಟ್ಟುಸಿರು ಬಿಟ್ಟು ಎರಡು ಹೆಜ್ಜೆ ಹಿಂಜರಿಯುತ್ತಾನೆ. ಕಲಿ ದ್ವಾಪರನನ್ನೇ ನೋಡುತ್ತ ಬೆರಗಾಗುತ್ತಾನೆ.

ಕಲಿ— ಅಣ್ಣಾ, ಏನ ನಿಟ್ಟಿಸುತಿರ್ಪೆ? ಏಕೆ ಬಿಸುಸುಯ್ಯುತಿಹೆ?

ದ್ವಾಪರ— (ಹೋದ ದೃಷ್ಟಿಯನ್ನು ತಿರುಗಿಸದೆ ಮರುಕದಿಂದ)
ನೋಡಲ್ಲಿ, ಕಲಿದೇವ?

ಕಲಿ— ಏನಿದೀ ಬೆಳಕುಗಳ್? ಕತ್ತಲೆಯೆ ನೂರ್ವಾರು
ಸೊಡರ್ಗಳಂ ತೆಕ್ಕನೆ ಬೆಸಲೆಯಾದಂದದಲಿ
ಕಣ್ಬಿಟ್ಟ ಪರಿವನ್ನೆವರಂ ಎತ್ತಲುಂ ಚಲಿಸಿ
ರಂಜಿಸಿರ್ಪುದು ಪೊಂಜುಗಳ ಬಲ್ಬಳಗಂ!

ದ್ವಾಪರ—ನೋಡಯ್, ಮತ್ತೇನನ್ ಕಾಂಬೆ, ನೋಡಯ್.

ಕಲಿ—(ವಿಸ್ಮಿತನಾಗಿ)
ಏನಿದೀ ರೂಪಗಳ್? ಕೆಂಜೊಡರ್ಗಳ ಮಬ್ಬು
ಬೆಳಕಿನಲಿ ಮುಸುಕು ಮುಸುಕಾಗಿರ್ಪ ಮಾನವರ
ನೂರಾರು ಛಾಯೆಗಳ್ ಮೆಲ್ಲನೆ ಚರಿಸುತಿಹವು.

ದ್ವಾಪರ—(ದುಃಖದಿಂದ)

ಅರಿಯೆಯೇನ್, ಕಲಿದೇವ, ಅರಿಯೆಯೇನ್ ? ಪಾಂಡವರ
ಕೌರವರ ಪಕ್ಷದಲಿ ಕಾದಾಡಿ ಮಡಿದವರ
ಅಕ್ಕರೆಯ ಬಂಧುಗಳು ತಮ್ಮವರ ಪೆಣಂಗಳಂ
ಪುಡುಕುತ್ತೆ, ದೇಹಮಿಹ ಪ್ರೇತಗಳ ತೆರದಿಂದೆ,
ಬಿಸುಸುಯ್ದು ಕಂಬನಿಯ ಸೂಸಿ ಅಲೆಯುತ್ತಿಹರ್ !
ಕಲಿ—ಜನನ ಮರಣದ ದುಃಖಗಳ್ ಪಿಂಡುಗೊಂಡು ಈ
ಮಸಣದಲಿ ಮೆರವಣಿಗೆ ಮಾಳ್ಪಂತೆ ತೋರ್ದಪುದು !
ದ್ವಾಪರ—ಇದೆ ಪರಾಕ್ರಮಶಾಲಿಗಳ ರಣೋತ್ಸಾಹಕ್ಕೆ
ಪ್ರತಿಫಲಂ ! ನೋಡಿದೆ ರಣೋನ್ಮತ್ತರಾಗಿರ್ದ
ಮೆಯ್ಗಲಿಗಳ್ದಟಿನಿಂದ್ಮುದಿಸಿರ್ಪ ಮಸಣಂ !
ಮೇಣಿದೆ ಮಹಾಭಾರತದ ಕುರುಕ್ಷೇತ್ರದಿಂ,
ವೀರ ಸಂಗ್ರಾಮದಿಂ, ಲೋಕಪ್ರಸಿದ್ಧವಹ
ವಿಜಯದಿಂ ಮೂಡಿ ಬಂದಿಹ ಸೂಡುಗಳ ಬೀಡು !
ಶವಗಳುಗ್ರಾಣಂ ! ನಿಶಾಚರಿಗಳಿಗೆ ನಾಡು !

(ಇಬ್ಬರೂ ನೋಡುತ್ತ ನೋಡುತ್ತ ದೂರವಾಗಿ ಕತ್ತಲಲಿ ಕರಗಿಹೋಗುತ್ತಾರೆ.)

## ದೃಶ್ಯ ೨

[ಶ್ಮಶಾನ ಕುರುಕ್ಷೇತ್ರದ ಮತ್ತೊಂದು ಭಾಗ. ದೂರ ಕತ್ತಲೆಯ ಅಂತರಾಳದಲ್ಲಿ ಪೊಂಜುಗಳ ಓಡಾಟವೂ, ಸ್ವಲ್ಪ ಮಾತ್ರ ಸ್ಪಷ್ಟ ಮನುಷ್ಯಾಕೃತಿಗಳ ಚಲನೆಯೂ ಕಾಣಿಸುತ್ತವೆ. ಆ ವ್ಯಕ್ತಿಗಳು ಬರಬರುತ್ತ ಸಮೀಪವಾಗುತ್ತವೆ. ಗೀರ್ವಾಣ, ನೀಲಾಕ್ಷ, ಚಾಣೂರರೆಂಬ ಮೂರು ಜನ ಕಿಂಕರರು ಪೊಂಜಿನ ಬೆಳಕಿನಲ್ಲಿ ಅತ್ತಿತ್ತ ತಿರುಗುತ್ತ, ಬಗ್ಗಿಬಗ್ಗಿ ನೋಡುತ್ತ ಹುಡುಕುತ್ತ ಬರುತ್ತಾರೆ. ಒಂದೊಂದು ಸಲ ತೇರುಗಳು ಮುರಿದು ಬಿದ್ದ ಸ್ಥಳಗಳನ್ನು ಬಗ್ಗಿ ಇಣಕಿ ನೋಡಿ ಪರೀಕ್ಷಿಸುತ್ತಾರೆ. ಒಂದೊಂದು ಸಲ ಹೆಣದಮೇಲೆ ಬಿದ್ದ ಹೆಣಗಳನ್ನು ನೂಕಿ ನೂಕಿ ನೋಡುತ್ತಾರೆ. ಒಂದೊಂದು ಸಲ ಕತ್ತಿ ಹೋದ ಮುಖಮಂಡಲಗಳನ್ನು ಪರೀಕ್ಷಿಸುತ್ತಾರೆ. ಅವರು ಕೌರವೇಂದ್ರನನ್ನು ಹುಡುಕಿಕೊಂಡು ಬಂದ ಚಾರರು. ತಮ್ಮ ಸ್ವಾಮಿಯ ಪರಾಭವವನ್ನು ಕೇಳಿ ಆತನಿರುವ ತಾಣವನ್ನು ಕಂಡುಹಿಡಿದು ಸೇವೆಮಾಡಲು ಆತುರರಾಗಿ ಬಂದಿದ್ದಾರೆ.]

ಗೀರ್ವಾಣ—(ಪೊಂಜನ್ನು ಸ್ವಲ್ಪ ಮೇಲೆತ್ತಿ) ಎಚ್ಚರಿಕೆ, ಎಚ್ಚರಿಕೆ, ಚಾಣೂರ.

ಕತ್ತಲಲಿ ಮುಂಚಿ ಮುಂದೆ ನಡೆಯದಿರು. ನೆತ್ತರುಗೆಸರಿನಲಿ ನಿಮಿರಿ ನಿಂತ ಕೋಲ್ಬುದಿಗಳಡಗಿಹವು.

(ಚಾಣೂರ ನಿಲ್ಲುತ್ತಾನೆ.)

ನೀಲಾಕ್ಷ—ಗೀರ್ವಾಣ, ದೀವಿಗೆಯನಿತ್ತ ಹಿಡಿ. ಮಣಿ ಮುಕುಟ ಮಸ್ತಕದ ಕಲಿಯೊರ್ವನಿಲ್ಲಿ ಪಟ್ಟಿಹನು. ಆಕೃತಿಯೊಳೆಮ್ಮೊಡೆಯನನೆ ಹೋಲುವನು.

ಚಾಣೂರ—(ಓಡಿಬಂದು) ಎಲ್ಲಿ? ಎಲ್ಲಿ?

(ಮೂವರೂ ಪೊಂಜಿನ ಬೆಳಕಿನಲ್ಲಿ ಬಗ್ಗಿ ನೋಡುತ್ತಾರೆ.)

ಗೀರ್ವಾಣ—ನೀಲಾಕ್ಷ, ನಿನಗೇನ್ ಹುಚ್ಚು ಹಿಡಿದಿದೆಯೆ? ಕಂಡ ಕಂಡ ಪೆಣನೆಲ್ಲಮುಂ ಎಮ್ಮೊಡೆಯನೆಂದೊದುರುತಿಹೆ!

ಚಾಣೂರ—ಕರಡಿಯನ್ ಕಂಡಳುಕಿದಾತಂಗೆ ಕಗ್ಗಲ್ಲೆ ಕರಡಿಯಹುದಂತೆ. ಅಂತೆ ನೀಲಾಕ್ಷಂಗನಿಬರುಂ ಕುರುಚಕ್ರವರ್ತಿಯಂತೆ ತೋರುವರು.

ನೀಲಾಕ್ಷ—(ದುಃಖದಿಂದ ನಿಡುಸುಯ್ದು) ಅಯ್ಯೋ, ಕೌರವಕುಲೇಂದ್ರನನ್ ನೋಡುವಾಸೆ ನನಗೆ ಮರುಳ್ಮರಿದಂತಿಹುದು. (ಕಣ್ಣೀರ್ಮಿಡಿದು) ಈ ಪೆಣದ ಬಣಬೆಗಳೊಳು ಕುರುಪತಿಯನೆಂತು ಹುಡುಕುವುದೊ ನಾನರಿಯೆ!. ಶವಗಳಂ ತುಳಿತುಳಿದು ಪೆಣದಿನಿಗ್ಗಳ್ತಾರುತಿಹೆವು.

ಚಾಣೂರ —ಬಾಣದ ಮೊನೆಗಳಂ ಮೆಟ್ಟಿ ಮೆಟ್ಟಿ ನನ್ನಡಿಗಳೆರಡೂ ಜಜ್ಜರಿತವಾಗಿಹವು. ಇದೇನು ರಣರಂಗವೊ! ಪಾಳ್ಗೊಲಿಯ ನೆಲೆ!

ನೀಲಾಕ್ಷ —ಇನ್ನೆಗಂ ಸಮರರಂಗಂ ಇನಿತು ಭಯಂಕರವೆಂದು ನಾನರಿದುದಿಲ್ಲ. ಸಮರ ಸಮಯಕಿಂತಲೂ ಸಮರೋಪಸಂಹಾರದೀ ಮಸಣಮೇ ಮಿಗಿಲ್ಗುರ್ವುವಡೆದಿಹುದಲ್ತೆ?

ಗೀರ್ವಾಣ—ಕಾಳೆಗದಿಂತಪ್ಪ ನಾಶದಗುಂದಲೆಯುಂ ನಾನಿಂದು ಮನಗಂಡೆ. ಕಟ್ಟಕಡೆಗಿಂತುಟಾಗುವುದೆಂದು ಮೊದಲಂದು ತಿಳಿದರಾರು?

ಚಾಣೂರ —ಸಮರ ಕಲಾಕೋವಿದರೆಂದು ಪೆಸರಾಂತ ಮೆಯ್ಗಲಿಗಳನ್ ತುಳಿಲಾಳ್ಗಳನ್ ಬಿಲ್ಲೋಜರನ್ ಇಚ್ಛಾಮರಣಿಗಳನ್ ಚಿರಂಜೀವಿಗಳನ್ ತನ್ನ ದಳದೊಳೆ ಪಡೆದ ಎಮ್ಮೊಡೆಯಂಗೆ ಸೋಲಪ್ಪುದೆಂದಾರು ಬಗೆದಿರ್ದರು?

ನೀಲಾಕ್ಷ —ಆರೇನನ್ ಮಾಳ್ಪರು, ಬಿದ್ದಿಯುಡ್ಡ ಬಪರ್ಾಗಳ್?

ಚಾಣೂರ —ಮುಂದೆ ನಡೆ, ಗೀರ್ವಾಣ. ಎಮ್ಮೊಡೆಯಂಗೆ ಕಟ್ಟಕಡೆಯ ಸೇವೆಯನಾದರುಂ ಗೈದು ಸೈಪಂ ಪಡೆವಂ.

ಗೀರ್ವಾಣ—ಎಮ್ಮೊಡೆಯನನ್ನರ್ ಮತ್ತಾವ ದಾತಾರನಂ ಇನ್ನಿಳೆಯ ಮೇಲಾವು ಕಾಣುವೆವು? ಜಯೆಯೊಳಾತಂಗೆ ದೊರೆಯಪ್ಪರಾರಿಹರು? ಡಿಂಗರಿಗರ್ಗೆ ಆತನೊಲು ಕಡುನೇಹಮಂ ತೋರ್ಪ ಚಕ್ರವರ್ತಿಗಳಾರು ಈ ತಿರೆಯೊಳಿರ್ಪರು?

ನೀಲಾಕ್ಷ —ನಮಗಾತನೇ ತಂದೆಯಾಗಿರ್ದನ್. ಆತನಳಿದ ಬಳಿಕ್ಕೆ ನಾಮೆಲ್ಲರುಂ ತಿರಿದುಂಬ ದೇಸಿಗರಲ್ತೆ?

ಚಾಣೂರ —ಹಾ ತಂದೆ, ಎಲ್ಲಿ ನರಳುತ್ತ ಪುಡಿಯೊಳು ಪವಡಿಸಿ ಪೊರಳುತಿಹೆ? ಗೀರ್ವಾಣ, ಎಮ್ಮೊಡೆಯನ ಎದೆಯನರಿವ ಸಲ್ಗತೆಯೊಂದನ್ ನಿಮಗೊರೆವೆನ್; ಆಲಿಸಿಂ. ಒರ್ದಿನಂ ನಟ್ಟಿರುಳ್. ಆನ್ ರುಜೆಯಿಂ ನೊಂದು ನರಳಿ ಸಜ್ಜೆಯೊಳ್ ಪವಡಿಸಿರ್ದೆ. ಎನ್ನಾಕೆ ಎನ್ನ ಪೊರೆಯೊಳೆ ಕುಳಿತು ಕಂಬನಿಗಳಂ ಸೂಸುತ್ತಲಿರ್ದಳು. ಎನಗೆ ಕಡೆಗಾಲಂ ಬಳಿಸಾರಿ ಬಂದಿತ್ತು. ಆ ಪೊಳ್ತಿನೊಳೆಮ್ಮ ಬೀಡಾರದ ಬಾಗಿಲನ್ ಆರೊ ತಳ್ಳಿದವೊಲಾಯ್ತು. ಎನ್ನಾಕೆ "ಆರವರ್?" ಎಂದು ಕುಳಿತಲ್ಲಿಯೆ ಕೂಗಿದಳು. ಆಗ ಕರುಣೆಯಿಂ ತುಂಬಿ ತುಳುಕುವ ಕೊರಲದೊಂದು "ಆನ್ ಬಂದಿಹೆನ್, ಚಾಣೂರ, ಬಾಗಿಲನ್ ತೆರೆ" ಎಂದಿತು. ತೆರೆಯೆ, ಚರರೊಬ್ಬರಿಲ್ಲದೆಯೆ ಒಂಟಿಗನಾಗಿ ಮೈಮುರೆಸಿಕೊಂಡು ಬಂದ ಕೌರವ ಸ್ವಾಮಿಯನ್ ಕಂಡೆ. ಎನಗೆ ಪರಮಾತ್ಮನಂ ದರ್ಶಿಸಿದ ಭಕ್ತನಂತೆ ಸಂತಸಂ ಮಿಗಿಲಾಗಿ ರುಜೆಯಡಗಿದುದು! ಕುರುಕುಲ ಸಾರ್ವಭೌಮನೆಲ್ಲಿ? ಆನೆಲ್ಲಿ? ಆತನೆಮ್ಮ ಇಷ್ಟದೈವಮೆ ದಿಟಂ!

ನೀಲಾಕ್ಷ —ಸೋತೊಡೇನ್? ಗೆದ್ದೊಡೇನ್? ಎದ್ದಡೇನ್? ಬಿದ್ದಡೇನ್, ನರಕದೊಳಿರ್ದೊಡೇನ್? ಸಗ್ಗದೊಳಿರ್ದೊಡೇನ್? ಎಮ್ಮೊಡೆಯನ್ ತಾನಾವಾಗಂ ಎಮ್ಮೊಲ್ಮೆಯೊಡೆಯನೈಸೆ!

ಗೀರ್ವಾಣ—ಅವನ ಮತಿ ನಮಗೆ ಮತಿ; ಅವನ ಗತಿ ನಮಗೆ ಗತಿ. ಬನ್ನಿಂ, ತಂದೆಯಂ ಪುಡುಕುವಂ!

(ಕಿಂಕರರು ಹುಡುಕುತ್ತ ಹೋಗಿ ಕತ್ತಲಲ್ಲಿ ದೂರವಾಗುತ್ತಾರೆ. ಮಾತೆಯೊಬ್ಬಳು ತನ್ನ ಕಂದನನ್ನು ಕೂಡಿಕೊಂಡು ರೋದಿಸುತ್ತ ಬರುತ್ತಾಳೆ. ಆಕೆಯ ಗಂಡನು ಮಡಿದ ಪಾಂಡವ ಪಕ್ಷದವರಲ್ಲಿ ಒಬ್ಬ ಕಾಲಾಳು. ಆ ರಾತ್ರಿ ಪತಿಯ ದೇಹವನ್ನು ಹುಡುಕಲು ಶ್ಮಶಾನ ಕುರುಕ್ಷೇತ್ರಕ್ಕೆ ಬರುತ್ತಾಳೆ.)

ಕಂದ —ಅಮ್ಮಾ, ಕತ್ತಲೆಯೊಳೆಲ್ಲಿಗೆ ಹೋಗುತಿಹೆ?

ಮಾತೆ —ಮಗೂ, ತಿರೆಗೆ ನಿನ್ನನ್ ಪಡೆದವನ ರುದ್ರಭೂಮಿಗೆ.

ಕಂದ —ಎಷ್ಟು ದೂರ? ಅದು ಇರುವುದೆಲ್ಲಿ?

ಮಾತೆ — ಅದನೆ ಹುಡುಕುತಿಹೆನು, ಕಂದಾ. (ಬಗ್ಗಿ ಒಂದು ಹೆಣವನ್ನು ನೋಡುತ್ತಾಳೆ. ಕಂದನೂ ಹೋಗಿನೋಡಿ)

ಕಂದ —ಅಮ್ಮಾ, ಯಾರಿವನು?

ಮಾತೆ —ಯಾವನೋ ನಿನ್ನಂತಹ ಮುದ್ದು ಕಂದನನ್ ಪಡೆದಿರುವ ತಂದೆಯೀತನು, ಮಗೂ.

ಕಂದ —ಇಲ್ಲೇಕೆ ಮಲಗಿಹನು? ಇವನಿಗೆ ಮನೆಯಿಲ್ಲವೆ? ದೇಸಿಗನೆ?

ಮಾತೆ —(ಸ್ವಗತ) ಬಾಳು ಏನೆಂಬುದನ್ ಅರಿಯದಿರುವ ಈ ಕೂಸಿಗೆ ಸಾವಿನ ಪರಿಚಯಮಂ ನಾನೆಂತು ಮಾಡಿಕೊಡಲಿ! (ಮಗುವಿಗೆ) ಕಂದಾ, ಕಾಳೆಗದ ನೆಲದೊಳೆ ವೀರರಿಗೆ ಬೀಡಿಲ್ಲ ಎಂದು ಹೇಳುವುದೆಂತು? ಸತ್ತವರ ಸಂಗದಲಿ, ಸತ್ತವರ ನೇಹದಲಿ ಬಾಳುತಿರುವ ಈತನನು ದೇಸಿಗನೆಂದು ಕರೆವುದೆಂತು? ಸಮರನಿಲಯಾಗ್ನಿಗೆ ಬಾಳನು ಬೇಳಿದವನು ಜವನಿದ್ದೆಯಲ್ಲಿಹನು. ಮರಳಿ ಎಚ್ಚರನು!

ಕಂದ— ಮರಳಿ ಮೇಲೇಳನೇ?

ಮಾತೆ- ಮೇಲೇಳನು.

ಕಂದ— ಮರಳಿ ಮಾತಾಡನೇ?

ಮಾತೆ— ಇಲ್ಲ.

ಕಂದ— ನನ್ನಂತೆ ಇವನಿಗೊಬ್ಬ ಕಂದನಿಹನೆಂದು ಹೇಳಿದೆಯಲ್ಲಾ, ಆ ಕಂದನನು ಮರಳಿ ಎದೆಗಪ್ಪಿ ನಲಿಯನೇ?

ಮಾತೆ— (ಶೋಕ ಹೆಚ್ಚಿ) ಇಲ್ಲ, ಮಗೂ, ಇಲ್ಲ! ಇನ್ನಿವನು ಚೆಲುವಾದ ಈ ತಿರೆವೆಣ್ಣ ಸಂಕದಲಿ ಸಂಚರಿಸಲಾರನು: ಕಾಲ್ಗಳುಡುಗಿಹವು!

ಇನ್ನಿವನ ಕೊರಲಿಂದ ಮಾನವರಾಡುವ ಇಂಚರದ ಮಾತುಗಳು ಹೊರಹೊಮ್ಮಲಾರವು: ನಾಲಗೆಯಳಿದಿಹುದು! ಇನ್ನೀತನೆದೆಯಲಿ ಸತಿಪ್ರೇಮ, ಸುತವಾತ್ಸಲ್ಯ, ಬಂಧುಮಮತೆ, ಕರುಣೆ, ನಯ, ದಯೆ ಮೊದಲಾದ ಮಾನವೀಯ ದಿವ್ಯಭಾವಗಳಲಿ ಒಂದಾದರೂ ಮೂಡಲರಿದು! (ಬಿಕ್ಕಿ ಬಿಕ್ಕಿ ಅಳುತ್ತಾಳೆ.) ನಗಲಾರನಿವನು! ಈತನಳಲೂ ಆರನು! ಸುಖಪಡಲಾರನು! ದುಃಖಪಡಲೂ ಆರನು!—ಶಿವಶಿವಾ, ಸಾವಿನ ಮೌನಕಿಂತಲು ಬಾಳಿನ ಗೋಳೆ ಲೇಸಲ್ತೆ?—ಕಂದಾ, ಈತನೀಗೊಂದು ಬರಿಯ ಎಲುಬು ಬಾಡುಗಳ ಗೂಡು! ಬರುವವರು ಹೇಳದಿಹ, ಇರುವವರು ಕಾಣದಿಹ, ಹೋದವರು ಬಾರದಿಹ ಸಾವಿನ ನಾಡು ಇವನಿಗೆ ಬೀಡು! ಈಗಳೀತಂಗೆ ಪಿತೃತ್ವಮಿಲ್ಲ, ಪತಿತ್ವಮಿಲ್ಲ, ಬಂಧುತ್ವಮಿಲ್ಲ, ಶತ್ರುತ್ವಮಿಲ್ಲ! ಈತನಣ್ಣನೂ ಅಲ್ಲ, ತಮ್ಮನೂ ಅಲ್ಲ—

ಕಂದ— (ಬೆಚ್ಚಿ) ಇನ್ನೇನಾಗಿರುವನಮ್ಮಾ?

ಮಾತೆ— (ದುಃಖಾತಿಶಯದಿಂದ) ಹೆಣ! ಹೆಣ! ಸತ್ತ ಸುಡುಗಾಡಿನ ಹೆಣ!

ಕಂದ— (ಕಂಬನಿ ತುಂಬಿ) ಅಮ್ಮಾ, ನಾವರಸುತಿರುವ ನನ್ನ ತಂದೆಯೂ ಇವನಂತೆಯೆ ಆಗಿರುವನೇನು?

ಮಾತೆ— (ಕಂದನನ್ನು ಬಿಗಿದಪ್ಪಿ ರೋದಿಸುತ್ತ) ಅಯ್ಯೊ, ನನ್ನ ಜೀವದ ಕಣ್ಣೇ, ಬಾಳಿನ ಸಲ್ಮೆಯನಿಂತು ತೋರುತಿಹ ನಿನ್ನ ಮುಗ್ಧತನದೆದುರು ಸಾವೆನಿತು ಕರ್ಕಶತರಮಾಗಿ ತೋರುತಿದೆ!

(ಮಾತೆ ಬಿಕ್ಕಿ ಬಿಕ್ಕಿ ಅಳುವ ಕಂದನನ್ನು ಕರೆದುಕೊಂಡು ಗೋಳಿಡುತ್ತ ಕತ್ತಲೆಯಲ್ಲಿ ಅದೃಶ್ಯಳಾಗುತ್ತಾಳೆ.)

## ದೃಶ್ಯ ೩

[ಅದೇ ಮಸಣದ ಮತ್ತೊಂದೆಡೆ. ಕತ್ತಲಲ್ಲಿ ವಿಕಾರಾಕೃತಿಯುಳ್ಳ ಮರುಳುಗಳೆರಡು ಭಯಂಗೊಂಡು ಬಿರುಬಿರನೆ ಬರುತ್ತವೆ. ಹಿಂದೆ ಹಿಂದೆ ನೋಡಿ ಕಿಟ್ಟನೆ ಚೀರುತ್ತವೆ.]

೧ನೆ ಮರುಳು—ಅಕ್ಕ, ನನಗಿನ್ನುಂ ಆ ಹಾಳು ದುರ್ಯೋಧನನ್ ಮತ್ತೆಲ್ಲಿ ಗದೆವೀಸಿ ಬರುವನೋ ಎಂದಳ್ಕು! ಮಾನವರ್ ಕೊಲೆಗೆ ಕೈ

ಯಿಡೆ ಮಾರಿಯಸ್ ಮೀರ್ದಪರ್.

೨ನೆ ಮರುಳು—ತಂಗೆ, ತೆಗೆ ತೆಗೆ ಪುಸಿಯುಳ್ಳನ್! ಇನ್ನೆಲ್ಲಿಯ ದುರ್ಯೋಧನನ್! ಭೀಮನ ಗದೆಯು ಪೆಟ್ಟನಿಂ ವೈಶಂಪಾಯನ ಕೊಳದ ತಡಿಯೊಳು ತೊಡೆಯೊಡೆದು ಪಟ್ಟಿಹನ್.

೧ನೆ ಮರುಳು—ಅಂತಾಗಲೆ ಬೇಕು ಆ ದುರುಳಂಗೆ!

೨ನೆ ಮರುಳು—ವಿಧಿವಿಳಸನದಿಂ ಅಂತಾದುದು; ಇಲ್ಲದಿರೆ ಭೀಮಂಗದುವೆ ಪಾಡಾಗುತಿತ್ತು. ನಾನಲ್ಲಿಯೆ ನಿಂತು ನೋಡಿದೆನು ಅವರ ಗದಾಯುದ್ಧಮಂ—ಕೌರವನು ಸೋತು ಸೋತವನಲ್ಲ; ಭೀಮನು ಗೆದ್ದು ಗೆದ್ದವನಲ್ಲ.

೧ನೆ ಮರುಳು—(ದೂರ ನೋಡಿ) ಅಕ್ಕ, ಇದೇನ್ ಮಾನವರ ಮರುಳಾಟಂ ಎಮ್ಮ ಮರುಳ್ತನಮುಮಂ ಗೆಲುವಂತಿರ್ಪುದು!

೨ನೆ ಮರುಳು—ನಿಶ್ಚಯಂ; ನಮಗೆ ಒಂದಿನಿತು ನಿಲಲುಂ ಎಡೆಯಿಲ್ಲ. ಮಾನವರ ಮುಂದೆಯೇ ಮಸಣಮುಂ ಮುತ್ತಿಹುದು.

೧ನೆ ಮರುಳು—ಎಮ್ಮ ಇರುಳ್ಚಿತಮುಂ ತಾಮೆ ಪಡೆದು ನಕ್ತಂಚರಿಗಳಾದಂತೆ ತೋರುವುದು.

೨ನೆ ಮರುಳು—ಈ ಎಡೆಯೊಳಾರುಂ ತೋರ್ಪುದಿಲ್ಲ. ಇಲ್ಲಿನಿತು ನಿಂತು ಬಳಲ್ಕೆ ಗಳೆದು ಮುಂತೆರಳುವಂ—ತಂಗೆ, ಏಂ ಭಯಂಕರಂ ಈ ಕುರುಕ್ಷೇತ್ರ ಸಂಗ್ರಾಮರಂಗಂ? ಮರುಳ್ಗಂ ಮರುಳ್ಪಿಡಿದು ಪೋಪಂತೆ ಕೊಲೆ ಕಳೆಯೇರಿರ್ಪುದು.

೧ನೆ ಮರುಳು—ಪಿಂತಣ್ಗೆ ಮತ್ತಾವ ಕಾಳೆಗದೊಳುಂ ಇಂತಪ್ಪ ಬೀರಮುಂ ಇಂತಪ್ಪ ಕೊಲೆಯುಮಂ ನಾನ್ ಪಾರ್ವ್ವರಿಯೆನ್.

೨ನೆ ಮರುಳು—ಏನ್ ಮತ್ಸರವೊ? ಏನ್ ಕಾಳಗದ ಪುರ್ಚೊ ಈ ಕೀಳ್ಮನಿಸರ್ಗೆ! ಇವರನ್ನೆನುಂ ಪೇಸುವೆನ್!

೧ನೆ ಮರುಳು—(ಭಯದಿಂದ) ಅಕ್ಕ, ಅತ್ತ ನೋಡಲ್ಲಿ!

೨ನೆ ಮರುಳು—ಮರುಳೋ ಮಾನವಳೊ?

೧ನೆ ಮರುಳು—ಮರುಳಲ್ತು. ಮರುಳು ಇಂತೆಗುರ್ವುವಡೆದು ತೋರ್ಪುದಿಲ್ಲಾವಗಂ! ಅವಳೊ ನರೆದಲೆಯ ಮುದಿಯಳಲ್ತೆ?

೨ನೆ ಮರುಳು—ತಂಗೆ, ಕೆದರಿರ್ಪ ನೆರೆನವಿರಿನಿಂದೇನ್ ರೌದ್ರಮಾಗಿಹಳ್?

ಪೆಣಗಳ ನಡುನಡುವೆ ಅದೇನನ್ ಬಾಗಿ ಬಾಗಿ ಅರಸುತಿಹಳ್?

೧ನೆ ಮರುಳು—ತನ್ನಣುಗನನ್ ಪುಡುಕುತಿರ್ಪಂತೆ ತೋರ್ದಪುದು. ಅಗೊ, ಪಾವನಮಪ್ಪ ತಾಯ ಒಲ್ಮೆವೆಳಗು ಪರಿವೇಷದಂತೆ ಆಕೆಯನ್ ಬಳಸಿ ಪೆಣದಿನಿಗಳಂ ಪೊಯ್ದೋಡಿಸುತ್ತಿಹುದು! ಇತ್ತಣ್ಗೆ ಬಳಿಸಾರಿ ಬರ್ಪಳ್! ಬಾರಕ್ಕಾ, ಮರೆಯಾಗುವಂ!

(ಮರುಳುಗಳು ಮಾಯವಾಗುತ್ತವೆ. ಹಣ್ಣು ಹಣ್ಣು ಮುದುಕಿಯೊಬ್ಬಳು ತನ್ನ ಮಗನನ್ನು ಹುಡುಕುತ್ತ ದೊಣ್ಣೆಯೂರಿಕೊಂಡು ಮೆಲ್ಲನೆ ಬರುತ್ತಾಳೆ. ಆಕೆಯ ಮಗನು ಕೌರವ ಪಕ್ಷದಲ್ಲಿ ನಿಂತು ಹೊಡೆದಾಡಿ ಮಡಿದ ಕಾಲಾಳುಗಳಲ್ಲಿ ಒಬ್ಬನು. ಬಂದ ಮುದುಕಿ ನಿಂತು ಸುತ್ತಲೂ ನೋಡಿ ನಿಡುಸುಯ್ದು ನಿರ್ವಿಣ್ಣ ಭಾವವನ್ನು ಪ್ರದರ್ಶಿಸುತ್ತಾಳೆ. ಆಕೆಯ ಮಾತುಗಳು ಆಯಾಸದಿಂದ ಅಸ್ಪಷ್ಟ. ನಡುನಡುವೆ "ಅಯ್ಯೋ-ಉಸ್" ಎಂಬ ಪದಗಳಿಂದ ವಿಶ್ರಾಂತಿ ತೆಗೆದುಕೊಳ್ಳುತ್ತಾಳೆ.)

ಮುದುಕಿ—ತೊಳಲಿದ್ದನಿತುಂ ಬಿತ್ತರಿಸುತಿಹುದಲ್ಲಾ ಈ ಪಾಳು ಪೆರ್ಮಸಣಂ! ಮುದಿತನಂ ಬರೆವರೆ ಜವ್ವನದ ಕಿರಿಯ ತಿರೆ ಬಿತ್ತರವಾಗಿ ಪಿರಿದಪ್ಪುದೆ ಸಾಜಂ! ಅಯ್ಯೋ, ಎನ್ನ ಮಗನೆತ್ತ ಪೋದನೋ ಎಲ್ಲಿಹನೋ ಕಾಣೆನಲ್ಲಾ. ತೊಳಲಿ ತೊಳಲಿ ಬಾಗಿ ಬಾಗಿ ಹೆಣಗಳಂ ನೋಡಿ ನೋಡಿ ಎನ್ನ ನಡು ಬೇನೆಯಿಂ ಸಿಡಿಯುತಿದೆ. (ಸೊಂಟದ ಮೇಲೆ ಕೈಯಿಟ್ಟು ಬೇನೆಯನ್ನು ಮುಖಭಂಗಿಯಿಂದ ಪ್ರದರ್ಶಿಸುತ್ತಾಳೆ.) ಕರೆದು ಕರೆದು ಕೂಗಿ ಕೂಗಿ ಎನ್ನ ಕೊರಲು ಒಣಗಿಹುದು. (ನಿಟ್ಟುಸಿರೆಳೆದು ಕುಳಿತುಕೊಂಡು ಶ್ಮಶಾನದ ವಿಸ್ತಾರವನ್ನೆಲ್ಲಾ ದೃಷ್ಟಿಸಿ "ಉಸ್" ಎನ್ನುತ್ತಾಳೆ.) ಇದೇನು ಕೊಲೆಯಾಟವೋ ಇಳೆಯ ಎನ್ನ ಕಂದರಿಗೆ ನಾನರಿಯೆನ್ (ತಲೆಯ ಮೇಲೆ ಕೈ ಹೊತ್ತುಕೊಂಡು ದೀರ್ಘವಾಗಿ ಆಲೋಚಿಸುತ್ತಾಳೆ.) ಅಯ್ಯೋ ಮಗೂ! ನಿಚ್ಚಮುಂ ಬೈಗುವೊಲ್ತಿನಲಿ ಗುಡಿಸಲ್ಗೆ ಬಂದು ನಾನಿತ್ತ ಕೈತುತ್ತುಗಳಂ ಮೆಲ್ಲುತ್ತ ಅಂದಂದಿನ ರಣವಾರ್ತೆಯಂ ಪೇಳುತಿರ್ದವನ್ ಇಂದೇತಕೆ ತಳುವಿದೆಯೊ? ನಿನಗೋಸುಗಂ ನಲ್ಲುಣಿಸಂ ಸಮೆದು ನೀನೈತರ್ಪ ಬಟ್ಟೆಯನೆ ನಿಟ್ಟಿಸುತ ಬಾಗಿಲೊಳೆ ಕುಳಿತು ಕಾದೆನ್. ಈಗಳೈತರ್ಪನ್ ಆಗಳೈತರ್ಪನ್ ಇನ್ನೇನೈತರ್ಪನ್ ಎಂದು ಹಾರೈಸುತಿರೆ ನೇಸರನ್ನೆಗಂ ಪಡುವಣ ಬಾನ್ದೆಸೆಯೊಳು ಬೈಗುಗೆಂಪಂ ಚೆಲ್ಲಿ ಒಯ್ಯನೆ ಮುಳುಗಿದುದು. ಕತ್ತ

ಲೆಯ ಮಬ್ಬುರ್, ತಿರೆಯೊಳುಂ ಮೋಹೆನ್ನೆರ್ದೆಯೊಳುಂ ಒರ್ವೆಯ್ಯಿ ಪರ್ಬಿದುದು —ಆಯ್ಯೋ ಇನ್ನೇನನ್ ಮಾಳ್ಪೆನ್? ಇನ್ನೆತ್ತಣ್ಗೆ ಪೋದಪೆನ್? (ಕರೆಯುತ್ತಾಳೆ.) ಓ ಎನ್ನ ಕಂದಾ, ನಾರಾಯಣಾ! ನೀನೆಲ್ಲಿರ್ಪಯ್! ಬಳಿಗೆ ಬಾರಯ್! ನಿನ್ನಜ್ಜಿಯನ್ ಸಂತೈಸದೆ ಬಿಡಯ್! ಎನಗಿನ್ನಾರಿರ್ಪರ್? ಎನಗೆ ನೀನೆ ಕಣ್! ನೀನೆ ಬಾಳ್! ನೀನೆ ಎರ್ದೆ! ನೀನೆ ಜೀವಂ! (ರೋದಿಸುತ್ತಾಳೆ.) ಕಂದಾ, ನಾರಾಯಣಾ! ನಾರಾಯಣಾ!

(ಕೃಷ್ಣನು ತನ್ನ ಭಕ್ತಶ್ರೇಷ್ಠನಾದ ವಿದುರನೊಡಗೂಡಿ ಅಲ್ಲಿಗೆ ಬರುತ್ತಾನೆ. ಆ ರಾತ್ರಿ ಆತನು ತೆರಪಿಲ್ಲದೆ ಕುರುಕ್ಷೇತ್ರ ಶ್ಮಶಾನದಲ್ಲಿ ಸಂಚರಿಸಿ ಸಾಯುವವರಿಗೆ ಮುಕ್ತಿಯನೀಡಾಡುವ ಮಹಾಕಾರ್ಯದಲ್ಲಿ ತೊಡಗಿದ್ದಾನೆ. ಮುದುಕಿ ಅಲ್ಲಿಗೆ ಬಂದ ಮಾರುವೇಷದ ಕೃಷ್ಣನನ್ನು ನೋಡಿ ಕೇಳುತ್ತಾಳೆ.)

ಮುದುಕಿ— ಅಪ್ಪಾ ಮಕ್ಕಳಿರಾ, ಎನ್ನ ನಾರಾಯಣನ್ ಎಲ್ಲಿರ್ಪನೆಂದು ತೋರ್ಪಿರಾ?

ಕೃಷ್ಣ— (ಮೃದು ಮಧುರ ಧ್ವನಿಯಿಂದ) ನಿನ್ನ ನಾರಾಯಣನ್ ಆರ್, ಅಜ್ಜಿ?

ಮುದುಕಿ— ನನ್ನ ನಾರಾಯಣನನ್ ಅರಿಯದವನ್ ನೀನೆಂತಹ ಕಿರಿಯವನೊ! ನಮ್ಮೊವರೊಳಂ ಮೋಣರಿಗಳೊಳಂ ನನ್ನ ನಾರಾಯಣನ ಬಲ್ಮೆಯಂ ತಿಳಿಯದರೊಳರೇ?

ಕೃಷ್ಣ— (ಸ್ವಲ್ಪ ಆಲೋಚಿಸಿದವನಂತೆ ನಟಿಸಿ) ಬಲ್ಲೆನ್, ತಾಯೆ, ಬಲ್ಲೆನ್ ಮನ್ನಿಸು ತಪ್ಪನ್. ನಿನ್ನ ನಾರಾಯಣನ್ ಈ ದಿಕ್ಕಿನೊಳೆ ಮಲಗಿಹನ್. ಪೋಗಿ ಕಾಣ್, ಅಜ್ಜಿ!

ಮುದುಕಿ— (ಆಶ್ಚರ್ಯದಿಂದ) ಮಲಗಿಹನ್? ಏಕೆ ಮಲಗಿಹನ್?

ಕೃಷ್ಣ— ಏತಕೊ, ತಾಯೆ, ಆನರಿಯೆನ್. ಆನ್ ಬರ್ಪ ವೇಳೆಯೊಳ್ ನಿನ್ನನೇ ಕೂಗುತಿರ್ದನ್.

ಮುದುಕಿ— (ಕೃಷ್ಣನ ಕಡೆಗೆ ಕೈನೀಡಿ) ಮಗೂ, ಬಾ ಇಲ್ಲಿ. ಎನ್ನನ್ ಮೇಗೆತ್ತಿ ನಿಲ್ಲಿಸು. (ಕೃಷ್ಣನು ಆದರದಿಂದ ಎತ್ತಿ ನಿಲ್ಲಿಸುತ್ತಾನೆ.) ಏನಪ್ಪಾ ನಿನ್ನ ಕೈಗುಣಂ! ಎನ್ನ ಬಳಲ್ಕೆಯನಿತುಮುಂ ದೂರಮಾಗಿ ಮೆಯ್ಗನಿತು ಬಲ್ಮೆ ಪೈದೋರಿಹುದು!

ಕೃಷ್ಣ— (ಮುಗುಳ್ನಗೆಯಿಂದ) ಜವ್ವನದ ಸಾನ್ನಿಧ್ಯಮೆ ಜವ್ವನಮಂ ತಂದಪ್ಪುದು, ಅಜ್ಜಿ.

ಮುದುಕಿ— ಮಗೂ, ನಿನಗೊಳ್ಳಿತಕ್ಕೆ ! (ತೆರಳುತ್ತಾಳೆ.)

ವಿದುರ— ವಾಸುದೇವ, ಏನ್ ಲೀಲೆ? ಏನ್ ಮಾಯೆಯಿದು ನಿನತು?
ಮುಕ್ತಿಗೆ ಮಹಾದ್ವಾರಮಾಗಿರ್ಪುದೀ ಪೊಳ್ತು
ಈ ಕುರುಕ್ಷೇತ್ರ ಶ್ಮಶಾನಂ !

ಕೃಷ್ಣ— ವಿದುರ, ಇಂಥೆನಗೆ
ಬಿಡುವಿಲ್ಲ. ಆಲಿಸು ! ಮೃತ್ಯುಮುಖರಾದವರ್
ತಿಳಿಯದೆಯೊ ಮೇಣ್ ತಿಳಿದೊ ಕರೆಯುತಿರ್ಪರೆನ್ನನ್.
ಆರಾದೊಡಂ ಆವ ನೆವದಿನಾದೊಡಂ ಎನ್ನ
ಗಣನೆಯಿಲ್ಲದ ನಾಮುಗಳೊಳೊಂದನಾದೊಡಂ
ಮರಣಕಾಲದೊಳುಸುರಿದರೆ ಎನ್ನನಿತ್ತಪೆನ್.
ಇಂಥಾನ್ ಸಾವರೆಲ್ಲರ ಬಳಿಯೊಳಂ ಇರ್ದು
ಪಕ್ಷಪಾತಂ ಗೈಯದೆಯೆ ಭವದ ಬಂಧನವ
ತುಂಡರಿಸಿ, ಬಿಕ್ಕುವೆನ್ ಬಿಡುಗಡೆಯ ಹಬ್ಬಮನ್ !

ವಿದುರ— ದೀನ ಸಂರಕ್ಷಕನೆ, ದುರ್ಜನರ್ ಸಜ್ಜನರ್
ಎಂಬ ತರತಮ ಭಾವಮಿಲ್ಲದೆಯೆ ಎಲ್ಲರ್ಗೆ
ಪದವಿಯೊಂದನೆ ಕೊಟ್ಟು ಪೊರೆವೆಯೇನ್ ?

ಕೃಷ್ಣ— ಭಕ್ತವರ, ಕೇಳ್ : ಸನ್ನಿವೇಶಂ ದೊರೆಯೆ
ದುರ್ಮಾರ್ಗದೊಳ್ ಕಾಲಿಡಲರಿಯದ ಸಜ್ಜನರ್
ಈ ಲೋಕದಲ್ಲಿಲ್ಲ ; ಮೇಣ್ ಸನ್ಮಾರ್ಗದೊಳ್
ಬೀಳಲಾರದ ದುರ್ಜನರ್ ಸೃಷ್ಟಿಯೊಳಗಿಲ್ಲ.
ದೇಶಕಾಲಗಳಿಂದೆ ಬದ್ಧವಾಗಿಹ ನೀತಿ
ಎರಡುಮಂ ಮೀರಿರ್ಪ ಮುಕ್ತಿಗೇನ್ ಹೊಣೆಯಹುದೆ ?
ಅಂತರಂಗದ ಮೂಲತತ್ವಮನರಿಯದಿಹ
ಕುಬ್ಜದೃಷ್ಟಿಯ ನರರ್ ತೆಗಳುವರ್, ನೂಂಕುವರ್
ಎಂದಾನ್, ಎಲ್ಲಮಂ ತಿಳಿಧಾನುಂ ಅಂತೆಸಗೆ
ನನ್ನಿಗೇ ಕುಂದಹುದು. ಎನಗೆ ದ್ವೇಷಿಗಳಿಲ್ಲ ;
ಪ್ರಿಯರುಮಿಲ್ಲ ; ಎನ್ನ ದಿಟ್ಟಿಗೆ ಎಲ್ಲರೊಂದೇ !

ವಿದುರ— ಪರಮ ಕರುಣಾಕರ,

ವೇದಗಳ್, ಶಾಸ್ತ್ರಗಳ್, ಆಗಮ ಪುರಾಣಗಳ್
ಸಜ್ಜನತೆ, ದುರ್ಜನತೆ, ಧರ್ಮಂ, ಅಧರ್ಮಂ,
ನೀತಿ, ಅನೀತಿ, ಪಾಪಪುಣ್ಯಗಳೆಂಬ,
ಸ್ವರ್ಗ ನರಕಗಳೆಂಬ ತಾರತಮ್ಯವನೊರೆದು
ವಿಧಿನಿಷೇಧಂಗಳಂ ಬೋಧಿಸಿರ್ಪವದೇಕೆ?

ಕೃಷ್ಣ— (ಗಗನವನ್ನು ನೋಡಿ ಸ್ವಲ್ಪಹೊತ್ತು ಸುಮ್ಮನಿದ್ದು)
ಭಕ್ತಿಯೋಗಿಯೆ, ವಿದುರ, ವೇದಶಾಸ್ತ್ರಗಳೆಲ್ಲ
ಎನ್ನೊಂದಂಶದ ವಾಣಿ; ಪೂರ್ಣವಾಣಿಯಲ್ತು.
ವೇದಗಳಿಗಿಂತಲುಂ, ಶಾಸ್ತ್ರಗಳಿಗಿಂತಲುಂ,
ಯೋಗಿ ಮುನಿಗಳಿಗಿಂತಲುಂ ಪಿರಿದು ಎನ್ನೆದೆಯ
ಬಿತ್ತರಂ. ವೇದಂಗಳೆಡೆಗುಡದ, ಶಾಸ್ತ್ರಗಳ್
ಬಳಿ ಸೇರಿಸಿದ, ಸಿದ್ಧಯೋಗಿಗಳ್ ಕೊಳ್ಳದಾ
ಪಾಪಿಗಳಿಗೆನ್ನೆರ್ದೆಯೊಳೆಡೆಯಿಹುದು; ಸೊಗವಿಹುದು.
ಎನಗೆ ಬೇಡದವರಾರಿಲ್ಲ; ತಾವಿಹುದು
ಎನ್ನೊಡಲೊಳೆಲ್ಲರ್ಗೆ. ರಹಸ್ಯಮಿದನಾಲಿಸಯ್:
ಎನ್ನೊಳ್ ನಿಷೇಧವೆಂಬುದೆ ಇಲ್ಲ; ನೀತಿಯುಂ,
ಸತ್ಯಮುಂ, ಧರ್ಮಮುಂ ಮೆಯ್ಯುಡವೆಗಳೆನಗೆ;
ಎನ್ನಂ ಬಿಗಿವ ಶೃಂಖಲೆಗಳಲ್ಲ. ಭಕ್ತವರ,
ಆನ್ ಬರಿಯ ತತ್ವಗಳ ಗುಂಪಲ್ಲ; ಮೇಣಾನ್
ಬರಿಯ ವ್ಯಕ್ತಿಯುಮಲ್ಲ: ರಸಪೂರ್ಣಮಾಗಿರ್ಪ
ಜಗದಾದಿ ಚೈತನ್ಯ ವ್ಯಕ್ತಿತ್ವಮೆಂದರಿ!
ಕ್ಷುದ್ರಮಹ ನಿಯಮಗಳಿಗಿಂತಲುಂ ದೊಡ್ಡವನ್;
ಶುಷ್ಕಮಹ ತತ್ವಗಳಿಗಿಂತಲುಂ ರಸಮಯನ್;
ನರೆತಿರ್ಪ ನೀತಿಗಿಂತಲುಂ ವೃದ್ಧನ್ ಮೊದಲವನ್!
ನಾಟಕದ ರಂಗದಲಿ ರಾಜಮಂತ್ರಿಗಳೆಂಬ,
ಸೈನಿಕರ್ ಸೇನಾನಿ ಪ್ರಜೆಗಳೆಂದೆಂಬ,
ಸಜ್ಜನರ್ ದುರ್ಜನರ್ ಪಾಪಿಗಳೆಂದೆಂಬ
ಭೇದಮಂ ಲೀಲೆಗೋಸುಗಮಾಗಿ ನಾನುಲಿವೆನ್.

ಲೀಲೆ ಮುಗಿಯಲ್ಕೆಲ್ಲರೊಂದಾಗಿ ಪೋದಪರ್!
ನಾಟಕದ ಕಳ್ಳನನ್ ಪಿಡಿದು ಸೆರೆಮನೆಗುಯ್ಯೆ
ಏನಾಟವಾದಪುದು! (ದೂರ 'ಭಗವಸ್ ವಾಸುದೇವ'
ಎಂಬ ಸದ್ದಾಗುವುದು.) ಕೇಳದೋ, ಭಕ್ತವರ!
ಚಿತ್ರಸ್ವಪ್ನವನೊಡೆಯುವಂ ಬಾ, ಪೋಗುವಂ.

(ಕೃಷ್ಣನು ಗಂಭೀರವಾಗಿ ತೆರಳುತ್ತಾನೆ. ಹಿಂದೆ ವಿದುರನು ಅಂತರ್ಮುಖಿಯಾಗಿ ಅನೈಚ್ಛಿಕವಾಗಿಯೆ ಹೋಗುತ್ತಾನೆ.)

## ದೃಶ್ಯ ೪

[ಕುರುಕ್ಷೇತ್ರದ ಮತ್ತೊಂದೆಡೆ. ಸಂಜಯನೊಡಗೂಡಿ ಧೃತರಾಷ್ಟ್ರನೂ ಗಾಂಧಾರಿಯೂ ಬರುತ್ತಾರೆ. ಗದಾಯುದ್ಧದಲ್ಲಿ ಭೀಮನಿಂದ ಪರಾಜಿತನಾದ ಕೌರವನು ಎಲ್ಲಿರುವನೆಂದು ಹುಡುಕಿಕೊಂಡು ಹೋಗುತ್ತಿದ್ದಾರೆ.]

ಸಂಜಯ— (ಸುತ್ತಲೂ ನೋಡಿ ದುಃಖದಿಂದಲೂ ವಿಸ್ಮಯದಿಂದಲೂ)
ಸದ್ದಿಲಿಯಿರುಳಿದೇನ್ ಸಯ್ತು ಪೆಣದಂತಿಹುದು!
ಆರ್ತನಾದಗಳೆಲ್ಲ ಮೌನಮನೆ ಪೆರ್ಚಿಪವು.
ಕಣ್ಗಂ ಮನಕ್ಕಂ ಭಯಂಕರಮಾಗಿರ್ಪುದು
ಈ ಸುಡುಗಾಡ ನೋಟಂ! ಕಣ್ಗಳಿಲ್ಲದ ನೀನೆ
ಧನ್ಯನಾದಯ್ ಇಂದು, ಧೃತರಾಷ್ಟ್ರ ಭೂಮಿಪನೆ.
ಐದಿಂದ್ರಿಯಂಗಳಿಂದೈತರ್ಪ ಬಲ್ಬೇನೆಗಿಂ
ನಾಲ್ಕಿಂದ್ರಿಯಂಗಳಿಂ ಬಹ ಬೇನೆ ತಾನ್
ಇನಿತು ಲಘುತರಮೈಸೆ?

ಧೃತರಾಷ್ಟ್ರ— ಪುಸಿಯದಿರ್, ಸಂಜಯ,
ಕಣ್ಣರಿಯದಿಹ ನೋವು ಕಿವಿಗಳಿಗೆರಡು ಮಡಿ
ಆದಪುದು. ಓ ವಿಧಿ, ಕುರುಡಿಂಗೇತರ್ಕೆ
ಕಿವುಡುಮಂ ಪೊದ್ದಿಸದೆ ನೀನೆನ್ನ ಮಾಡಿದಯ್?

ಗಾಂಧಾರಿ— (ದುಃಖದಿಂದ)
ಸಂಜಯ, ಪೊಳ್ತಡೆಯೊಳೆನ್ನಣುಗಂ ಬೆರಸಿ
ರಣರಂಗಕೆಯ್ತಂದೆ. ತೋರವನನೀಗಳ್.

ಎಲ್ಲಿರ್ಪನಾತನ್ ?—ಹಾ ಮಗನೆ, ನಿನ್ನನಾನ್
ಬಯ್ದುದನ್ ಮನ್ನಿಸಯ್. ಆರ್ಗೆ ನೀನೇನಾದರೇನ್ ?
ನಲ್ಲುಗ್ವರಸೆನಗೆ ನೀನ್ ! ದೈವಕ್ಕೆ ದ್ರೋಹಿಯೋ ?
ಧರ್ಮಕ್ಕೆ ಬಾಹಿರನೊ? ನನ್ನಿಗಪರಾಧಿಯೋ ?
ಸಜ್ಜನಕೆ ಪಾಪಿಯೋ ? ಭೀಮಂಗೆ ಶತ್ರುವೋ ?
ಎನಗಂತುಂ, ಓ ಕಂದ, ಮುದ್ದು ಕುವರನ್ !
ತಂದೆ ತೊರೆದಪನೆಂದು, ತಾಯಿ ಪಳಿದಳೆಂದು,
ಮಿತ್ರರ್ ಅಳಿದರೆಂದು, ಗುರುಸುತನುಳಿದನೆಂದು
ನೊಂದೆಯೇನ್ ? ಬೆಂದೆಯೇನ್ ? ಸತ್ರಿನ್ನನ್ ಕೊಂದೆಯೇನ್?
ಅಯ್ಯೋ ಮುನಿಯಬೇಡೆನಗೆ ಕಂದಾ (ಅಳುತ್ತಾಳೆ).

ಸಂಜಯ—(ಸ್ವಗತ) ಸಂತವಿಡಲಾರೆನ್ : ಸುಮ್ಮನಿರಲೂ ಆರೆನ್ ;
ಅಳುವರನ್ ಸಂತವಿಡೆ ಅಳಲುಕ್ಕಿ ಪರಿದಪುದು.
ಅಳಲು ಕಂಬನಿಯಾಗಿ ಪರಿಯಲ್ಕದುವೆ ಶಾಂತಿ.
ಮಸಣದಲಿ ಒಣತತ್ವಗಳನೊರೆಯೆ ತರಮಲ್ತು !
ಗೋಳಾಡುವರ ಕೂಡೆ ಗೋಳಿಡುವುದೇ ಲೇಸು !
ಪಡೆದ ಬಸಿರಿನ ನೋವನಾರು ಸಂತೈಸುವರ್ !
(ಬಹಿರಂಗವಾಗಿ ಗಾಂಧಾರಿಯ ಕಡೆ ತಿರುಗಿ)
ದೇವಿ, ಕುರುಕುಲ ಲಲಾಮನನ್ವೇಷಣೆಗೆ
ಸೇವಕರನಟ್ಟಿಹೆನ್—(ಧೃತರಾಷ್ಟ್ರನ ಕಡೆ ತಿರುಗಿ)
ದೊರೆಯೆ, ಬಾ ತೆರಳುವಂ ;
ಬಿಳ್ದ ಮಗನನ್ ಮಡಿವ ಮುನ್ನಮೆ ಕಾಣುವಂ,
ತಳುವಿದರೆ ಕೈಮಿಂಚುವುದು ಕಜ್ಜಂ.

ಧೃತರಾಷ್ಟ್ರ—ಸಂಜಯ, ನೀನೆನ್ನ ಕಣ್ಬೆಳಕು ; ನೀನೆನ್ನ
ಕೈಗೋಲು. ಮುಂದೆ ನಡೆ, ಬಂದಪೆನ್. (ಗಾಂಧಾರಿಗೆ)
ಬಾ, ಬಾ ;
ಕಂಬನಿಯ ಪೊಳೆಯೊಳೆ ತೇಲಿ ಪೋಗುವಂ, ಬಾ !

(ಎಲ್ಲರೂ ತೆರಳುತ್ತಾರೆ. ಭಾನುಮತಿ ಒಬ್ಬಳು ಸಖಿಯೊಡನೆ ಬರುತ್ತಾಳೆ. ಆಕೆಯ ಮುಗುಡ ಮಾತಿಗೆ ಮಿಡಿದಿದೆ. ಹುಚ್ಚಳಂತಿದ್ದಾಳೆ)

ಸಖಿ— ಭಾನುಮತಿ, ತಾಯಿ, ಇತ್ತಲೈತರು, ಅದೋ
ಸಂಜಯನೊಡಗೂಡಿ ದೇವರುಂ ದೇವಿಯುಂ
ಪೋದಪರ್. (ಸ್ವಗತ) ಕಂಬನಿಯ ಮುನ್ನೀರೊಳನಿಬರುಂ
ಮುಳುಗಿರೆ ಆರನಾರ್ ದಡಕೆಳೆದು ರಕ್ಷಿಪರ್ ?

(ಭಾನುಮತಿ ಮುಸುಕುಹಾಕಿಕೊಂಡು ಶೋಕದ ಛಾಯೆಯಂತೆ ಸಖಿಯೊಡನೆ ಹೋಗುತ್ತಾಳೆ.)

## ದೃಶ್ಯ ೫

[ಶ್ಮಶಾನ ಕುರುಕ್ಷೇತ್ರದ ಮಗುದೊಂದೆಡೆ. ಧರ್ಮರಾಯ, ಭೀಮ, ಅರ್ಜುನ, ದ್ರೌಪದಿ ಮೊದಲಾದವರು ಬರುತ್ತಾರೆ— ಘಟೋತ್ಕಚ, ಅಭಿಮನ್ಯು ಮೊದಲಾದ ನಂಟರಿಪ್ಪರ ಅನ್ವೇಷಣೆಗಾಗಿ. ಧರ್ಮರಾಯನು ಶ್ಮಶಾನವನ್ನು ನೋಡಿ ದುಗುಡದಿಂದ ನಿಟ್ಟುಸಿರೆಳೆಯುತ್ತಾನೆ]

ಧರ್ಮರಾಯ— ಇದೆ ಎನ್ನ ಧರ್ಮಕ್ಕೆ ಪ್ರತಿಫಲಂ ! ವಾಯುಸುತ,
ನೋಡಿದೋ ನಿನ್ನ ಬಲ್ಮೆಯ ಕಿಚ್ಚು ಬೇಳ್ದಿರ್ಪ
ದ್ವಾಪರ ಮಹಾಪುರುಷನುಪವನಂ !

ಭೀಮ— ಅಹುದಹುದು,
ಧರ್ಮಂ ಬೇಳ್ದಿರ್ಪ ಅಧರ್ಮಧುದ್ಯಾನಂ ;
ಪುಣ್ಯಾಗ್ನಿಗಾಹುತಿಯಾದ ಪಾಪದ ಬೆಳಸು !

ಅರ್ಜುನ— ಕೊಲೆಯ ಮುನ್ನುಡಿಯೇಕೆ ಧರ್ಮಸಂಸ್ಥಾಪನೆಗೆ ?
ರಕ್ತರಣಧುನಿ ಹರಿಯದೆಯೆ ಧರ್ಮಂ ಭೂತಳಕೆ
ಕಾಲಿಡದೆ ?
(ದ್ರೌಪದಿ ಅರ್ಜುನನನ್ನು ನೋಡಿ ಮುಗುಳ್ನಗುತ್ತಾಳೆ.)

ಭೀಮ— ಪೋಗಿ ಕೇಳಾ ಕೃಷ್ಣನನ್. ಪೇಳ್ವನ್.
ವಿಕಾಸಮಾಗುವುದರೊಳೆ ವಿನಾಶಮೈತಂದಪುದು.
ಬೋಧನೆಯ ಮಾರ್ಗಕ್ಕೆ ಶತಮಾನಗಳೆ ವೇಳ್ಕುಂ ;
ವಿಪ್ಲವದ ಪಥವಿಡಿಯೆ ದಿನವೆರಡೆ ಸಾಲ್ಗುಂ.
ಯುಗಯುಗಗಳೆದೆಗೆ, ಒರ್ದಿನಂ ಗಡೆಗೆ !
ಪದಿನೆಂಟೆ ದಿನಗಳೊಳ್ ಮುಗಿದಿರ್ಪುದೊಂದು

ಕಲ್ಪದ ಕಜ್ಜಂ. ಸಿದ್ಧಿಯಿಂ ಬಹ ಪುಣ್ಯಮೇ ಗಂಗೆ,
ಸಾಧನೆಯ ಪಾಪಕ್ಕೆ!

ದ್ರೌಪದಿ— ಲೇಸನುಸಿರ್ದಯ್, ಭೀಮಸೇನ.
ವೀರರ್ಗೆ ಕ್ಲೈಬ್ಯಂ ತಕ್ಕುದಲ್ತು.
ಕೊಂದ ಮೇಲಿನ್ ನೊಂದೊಡೇನ್?

(ರಣರಂಗದಲ್ಲಿ ಬಿದ್ದು ಸಾಯುತ್ತಿರುವ ಅನಾಮಧೇಯ ಸೈನಿಕನೊಬ್ಬ "ಅಯ್ಯೋ ನೀರು!" ಎಂದು ಕೂಗಿಕೊಳ್ಳುತ್ತಾನೆ.)

ಧರ್ಮರಾಯ—(ಅಕಡೆ ನೋಡಿ) ಅವನದು ಆರ್ತಧ್ವನಿ?

ಭೀಮ— (ಉದಾಸೀನದಿಂದ)
ಅವನೋ ಸಾಯುತಿಹ ರಣದಾಳ್ ಕೂಗುವನ್!

ಧರ್ಮರಾಯ—ಮನುಜನ್ ನರಳುತಿರೆ ಮನುಜನ್ ಸಂತವಿಸೆ
ಮನುಜನ್ ದೇವನ್ ತಾನಾದಪನ್; ಇಲ್ಲದಿರೆ
ಮನುಜನ್ ದನುಜನ್.

(ಧರ್ಮರಾಯನು ಸೈನಿಕನ ಬಳಿ ಹೋಗಿ ಮೊಣಕಾಲೂರುತ್ತಾನೆ.)

ಸೈನಿಕ—(ಒರಲುತ್ತ) ಅಯ್ಯೋ ನೀರ್!

ಧರ್ಮರಾಯ—ಅರ್ಜುನಾ, ಪೋಗಿ ಬೇಗದಿಂದುದಕಮಂ
ಕೊಂಡುಬಾ. (ಅರ್ಜುನನು ಹೋಗುತ್ತಾನೆ.)

ಭೀಮ—(ದೂರದಿಂದಲೆ) ಅಗ್ರಜಾ, ಮೊದಲ್ ಅವನಾರವನ್?
ಕೇಳದನ್! ನಮ್ಮವನೊ? ಕೌರವನ ಪಡೆಯವನೊ?

ಧರ್ಮರಾಯ—ಭೀಮಸೇನ,
ನೀನೀಗಳಾದೊಡಂ ವೈರಮಂ ಬಿಟ್ಟು ಕಳೆ.
ಮಸಣದೊಳ್ ಮರಣದೊಳ್ ಆರಾದಡಾರವರ್?
ಎಲ್ಲರುಂ ಜವನವರ್! ನಮ್ಮವರ್ ನಿಮ್ಮವರ್
ಎಲ್ಲರುಂ ಅವನವರ್! ಇಂತಿರಲ್ ನೀನೇಕೆ
ನಿಷ್ಕರುಣೆಯಿಂದಾಡುತಿಹೆ? ಪಗೆಯುಂ, ಕೆಳೆಯುಂ,
ಪೇರಾಸೆ, ಮಚ್ಚರಂ, ಹೋರಾಟಮಿವೆಲ್ಲಂ
ಸ್ವರ್ಗದ ಸುನೀಲ ಔದಾರ್ಯದೊಳ್ ಮುಳುಂಗಿ
ತಲ್ಲೀನಮಾದಪವು ತುತ್ತತುದಿಗೆ!

ಭೀಮ— (ದ್ರೌಪದಿಗೆ) ಕೃಷ್ಣೇ,
ಕೇಳ್ದಿಯೇನ್ ಅಗ್ರಜನ ನುಡಿಗಳನ್. ನಿಷ್ಕರುಣಿ
ನಾನಂತೆ. ತಾಮೆಲ್ಲರುಂ ಮಹಾಕರುಣಿಗಳ್!
ಸಮರದೊಳ್ ಗದೆಯುಂ ಬಿಸುಟ್ಟಾನುಂ ಕರುಣೆಯುನ್
ಕೈದುಮಾಡಿರ್ದೊಡೆ ಇವರ್ಗಾವ ಗತಿಯಿತ್ತು ?

ಧರ್ಮರಾಯ—ಕಟ್ಟಕಡೆಯೊಳ್ ಎಮಗೆ ಕರುಣೆಯೆ ಶರಣ್ಯಂ!
ದಯೆ ಎಂಬುದಾ ಸಚ್ಚಿದಾನಂದಮಾಗಿರ್ಪನ
ಮಾರ್ದೊಳಪಲ್ತೆ ? ಅನುಜ, ನೀನರಿಯೆಯಾ:
ಬಾನಿನಿಂ, ಮುಗಿಲ ಮನೆಯಿಂ, ಮೇಣ್ ಸಗ್ಗದಿಂ
ಇಳಿದೈತರ್ಪ ಹೂವುಗಳ ಸೋನೆಮಳೆಯಂದದೊಳ್
ಕರುಣೆ ತಾಂ ಪೇರೆರ್ದೆಗಳಿಂದೊಯ್ಯನಿಳಿತಂದಪುದು.
ರಾಜ ಕರವಾಲಕಿಂತಲುಂ ಕರ್ಕಶಂ ಕರುಣೆ;
ಶತ್ರುಗಳನೊಲಿಸುವುದು ಮಿತ್ರರನ್ ಮಾಡಿ.
ಭಗವಂತನೆರ್ದೆಗಿಂತಲುಂ ಕೋಮಲಂ ಕರುಣೆ;
ಪರಮಾತ್ಮನೆರ್ದೆಯನೇ ಸೂರೆಗೊಂಡಪುದಲ್ತೆ ?
ಕೊಡುವವನ ಹರಸುವುದು; ಕೊಳ್ಳುವನ ಸಲಹುವುದು;
ಕರುಣೆಯೆಂಬೈಶ್ವರ್ಯ ಅಳಿದೊಡಂ, ಉಳಿದೊಡಂ,
ಪೋದೊಡಂ ಬಂದೊಡಂ, ಪಡೆದವನದಾವಗಂ
ಶ್ರೀಮಂತನಾಗಿರ್ಪನ್! ಪಡೆದು ಕೊಡುವರ್ಗೆ ಅದು
ಮುಕ್ತಿಗೆ ಮಹಾದ್ವಾರಂ; ಮೇಳೈಸಿಕೊಂಬರ್ಗೆ
ಸ್ವರ್ಗಕ್ಕೆ ಸೋಪಾನಂ!

ಭೀಮ— (ಸ್ವಗತ) ಮುಂ ಪಲರ್ಮೆ
ಕೇಳಿರ್ದೆನ್ ಆನಿದನ್!

(ಅರ್ಜುನನು ನೀರು ತರುತ್ತಾನೆ. ಧರ್ಮರಾಯನು ಸೈನಿಕನಿಗೆ ನೀರು ಕುಡಿಸುತ್ತಾನೆ. ಸೈನಿಕನು ನಿಟ್ಟುಸಿರೆಳೆದು ಕಣ್ದೆರೆದು ನೋಡಿ)

ಸೈನಿಕ— ಆರಿವರ್? ಪಾಂಡವರೆ! ಅಯ್ಯೋ,
ಕೌರವ ಸ್ವಾಮಿಯೊಳ್ ಅಪರಾಧಮೆಸಗಿದೆನೆ
ತುತ್ತತುದಿಯೊಳ್ ಪಾಂಡವರ ಕೈನೀರನೀಂಟಿ?

ಮನ್ನಿಸೆನ್ನನ್, ಪ್ರಭೂ! ಮನ್ನಿಸಂ‌ರ್! ಮನ್ನಿಸಯ್!

(ಸಾಯುತ್ತಾನೆ.)

ಭೀಮ— ಈತನೀಗಳ್ ಎನಗೆ ಮೆಚ್ಚಿನ ಬೀರನ್!
ಬಾಳಿನೊಳ್ ಎಂತುಟೋ ಅಂತೆಯೆ ಸಾವಿನೊಳಂ
ನೋವಿನೊಳಂ ಎರ್ದೆಗಿಡದೆ ಪಗೆಯಂ ಸಾಧಿಪನೆ
ಸಹಜ ವೀರನ್! ಮಿಕ್ಕವರ್ ಕೃತ್ರಿಮದ ವೀರರ್!

(ದೃಶ್ಯ ಕಣ್ಮರೆಯಾಗುತ್ತದೆ.)

## ದೃಶ್ಯ ೬

[ವೈಶಂಪಾಯನ ಸರೋವರದ ತೀರ. ಕತ್ತಲೆ ಕವಿದುಕೊಂಡಿದೆ. ಮೇಲೆ ವಿಶಾ ವಾಗಿ ಹಬ್ಬಿರುವ ನೀಲಿಮಾ ವಿತಾನದಂತೆ ತೋರುವ ದ್ವಾಪರಯುಗದ ಆಕಾಶವ ದ್ವಾಪರಯುಗದ ನಕ್ಷತ್ರಗಳಿಂದ ಖಚಿತವಾಗಿದೆ. ಸರೋವರದ ಸುತ್ತ ಕೆಲವು ದಿಕ್ಕು ಗಳಲ್ಲಿ ಕುರುಕ್ಷೇತ್ರ ಶ್ಮಶಾನದ ಕರಾಳ ದೃಶ್ಯವಿದೆ. ಆ ಸರೋವರದ ತೀರದಲ್ಲಿ ಕೌ ವೇಂದ್ರನು ಊರುಭಂಗ ಕಿರೀಟಭಂಗವಾಗಿ ನೋವಿಗೂ ಅವಮಾನಕ್ಕೂ ವಿಷಾದಿಸುತ್ತ ಬಿದ್ದಿದ್ದಾನೆ. ಅಷ್ಟಾದಶಾಕ್ಷೋಹಿಣೀ ಪತಿಯೂ ಚಕ್ರವರ್ತಿಯೂ ಆದ ಆತನು ಅ ದೇಸಿಗನಂತೆ ಹೊರಳುತ್ತಿದ್ದಾನೆ. ಆತನೆದುರು ಇದ್ದರೂ ಇಲ್ಲದವನಂತೆ ಅಶ್ವತ್ಥಾಮನು ಗಗನದೆಡೆಗೆ ನೋಡುತ್ತ ನಿಷ್ಪಂದನ್ನಾಗಿ ಕಂಬನಿದುಂಬಿ ನಿಂತಿದ್ದಾನೆ.]

ಕೌರವ—(ವಿಷಾದದಿಂದಲೂ ನಿರಾಶೆಯಿಂದಲೂ)

ಪೋಗು, ನಡೆ, ಅಶ್ವತ್ಥಾಮ! ಆರಿದೊರ್ಡೇಗೈವರ್?
ತನಗೆ ತಾನಲ್ಲದಾರಾಗುವರ್ ಆಳ್ಗೆ?
ನಡೆ, ಪೋಗು; ಒಂಟಿಯಾಗೈತಂದವನ್ ನಾನ್
ಒಂಟಿಯಾಗಿಲ್ಲಿಂದೆ ತೆರಳ್ದಪೆನ್. ನಡೆ, ಪೋಗು!

(ಅಶ್ವತ್ಥಾಮನು ಮಾತಾಡದೆ ಕೌರವನಿಗೆ ಕೈಮುಗಿದು ನಿಧಾನವಾಗಿ ಹೋಗಿ ಮ ಯಾಗುತ್ತಾನೆ. ಕೌರವನು ಮರಳಿ ಏನನ್ನೊ ಆಲೋಚಿಸಿ ಕರೆಯುತ್ತಾನೆ.)

ಕೌರವ—ಗುರುಪುತ್ರಾ! [ಅಶ್ವತ್ಥಾಮನು ಬಂದು]

ಅಶ್ವತ್ಥಾಮ—ಕೌರವೇಂದ್ರಾ, ಇದೋ ಬಂದೆನ್.
ಅರುಹು ಬೆಸನೇನಿಹುದು; ಮಾಳ್ಪೆನೆಲ್ಲಮನ್.
ತುತ್ತತುದಿಯಾಕಾಂಕ್ಷೆ ಏನಿರ್ದೊಡಂ ಪೇಳ್,
ಗುರಿ ತಪ್ಪದೆಸಗುವೆನ್!

ಕೌರವ— ಆಕಾಂಕ್ಷೆ! ಆಕಾಂಕ್ಷೆ!
ಸುಡುಗಾಡಿನಾಕಾಂಕ್ಷೆ! ಇದನೊಂದನಾದರುಂ,
ನರ್ಕಳಂ ಮರಿಗಳಂ ಪಶುಗಳಂ ಪೆಣ್ಗಳಂ
ಕಳ್ತಲೊಳ್ ಪಾಂಡವರ್ ಗೆತ್ತು ಕತ್ತರಿಸಿದೊಲೆ,
ಬೆಮೆಗೊಳ್ಳದೆಸಗುವೆಯಾ?

ಅಶ್ವತ್ಥಾಮ— ಋಣಪಿಂಗಲೆಸಗುವೆನ್.

ಕೌರವ— (ಮರುಗುವ ದನಿಯಿಂದ)
ಕರ್ಣನನ್ ಎನ್ನೊಡನೆ ಚಿತೆಯಲ್ಲಿ ಬೇಳ್ದಪೆಯಾ?
ನಾವಿರ್ವರೊಂದಾಗಿ ಭೂಮಿಯೊಳ್ ಬಾಳಿದೆವು;
ನಾವಿರ್ವರೊಂದಾಗಿ ಸಾಮ್ರಾಜ್ಯವಾಳಿದೆವು;
ಸಾವಿನೊಳು ಇರ್ವರುಂ ಒಂದಾಗಿ ನಲಿಯುವೆವು.
ಸೂಡೊಳುಂ ನಾವಿರ್ವರೊಂದಾಗಲೆಳಸುವೆನ್!
ನಮ್ಮಿರ್ವರಾ ಬೂದಿ ಎರಡಱಿಯದಂತಿರ್ಕೆ!
ಇದನೊಂದನಾದರುಂ ಬೆಮೆಗೊಳ್ಳದೆಸಗುವೆಯಾ?

ಅಶ್ವತ್ಥಾಮ—ರಾಜಾಜ್ಞೆ, ಪೋಗಿ ಬರ್ಪೆನ್. (ಹೋಗುತ್ತಾನೆ.)

ಕೌರವ— ನಿಮ್ಮೆಲ್ಲರಂ ನಂಬಿ ಮೋಸವೋದೆನ್!
ಓ ಪಿತಾಮಹ ಭೀಷ್ಮ, ಓ ಗರುಡಿಯಾಚಾರ್ಯ,
ನೀವೆಲ್ಲರೆನ್ನ ಕಡೆಯವರಲ್ತೆ?
ತನುವನೆನಗಿತ್ತು ಮನಮನವರ್ಗಿತ್ತು
ಜೋಳದ ಪಾಳಿಗೋಸುಗಮೆ—
ಎನ್ನ ಮೇಲಣಭಿಮಾನದಿಂದಲ್ತು, ನಾನ್ ಬಲ್ಲೆನದನ್—
ಬರಿಯ ಜೋಳದ ಪಾಳಿಗೋಸುಗಮೆ
ಎನ್ನ ಪಕ್ಷದಿ ನಿಂತು ತೋರ್ಕೆಗೆ ಪೊಣರ್ದಿರಲ್ತೆ?
ನೀವೆಲ್ಲರೆರ್ದೆಮುಟ್ಟೆ, ಮನಮುಟ್ಟೆ, ಕಾದಿರ್ದೊಡೆ
ಎನಗಾಗುತಿರ್ದುದೇ ಈ ಪರಾಭವಂ,
ಈ ಅಪಮಾನಂ, ಈ ಊರುಭಂಗಂ?
ಪುಸಿನೆವಗಳೊದಗಲ್ ಒಡನೆಯೆ ಜಾರಿದಿರಿ!
ಧರ್ಮದ ಮುಸುಂಗಂ ತೊಟ್ಟು ಕೈತವಂ ತೋರಿದಿರಿ!

ಓ ಎನ್ನ ನಚ್ಚಿನ ಸೋದರ! ದುಶ್ಶಾಸನ—
ಓ ಕೆಳೆಯಾ, ಓ ಕರ್ಣಾ—ಅರದು ?

(ದ್ವಾಪರನು ಪ್ರವೇಶಿಸುತ್ತಾನೆ.)

ದ್ವಾಪರ— ಚಕ್ರವರ್ತಿ !

ಕೌರವ— (ವಿಕಟ ಹಾಸ್ಯದಿಂದ)ಆರವರ್ 'ಚಕ್ರವರ್ತಿಯೆನ್' ಕರೆಯುವರ್?

ದ್ವಾಪರ— ಕುರುಕುಲ ಸಾರ್ವಭೌಮ, ನಾನಿದೋ ದ್ವಾಪರನ್ !

ಕೌರವ— ದ್ವಾಪರ ಮಹಾನುಭಾವ, ಆಸ್ಥಾನಮೆನಗಿಲ್ಲ ನಿನ್ನನ್ ಪೀಠ
ದೊಳ್ ಕುಳ್ಳಿರಿಸೆ ! ಅದರಿಂದಂ ಕ್ಷಮಿಸು !

ದ್ವಾಪರ— ರಾಜೇಂದ್ರ, ಮಣಿಯದೆಯೆ ಬಾಳ್ವ ನರನೆರ್ದೆಯೆ ಮಹಾಸ್ಥಾನಂ
ಸ್ವಾತಂತ್ರ್ಯಮೇ ಸಾಮ್ರಾಜ್ಯಮಲ್ತೆ ? ಸ್ವತಂತ್ರಿಗಿಂ ಮಿಗಿಲಪ್ಪ
ಚಕ್ರವರ್ತಿಗಳ್ ಇನ್ನೊಳರೇ ? ನೀನಾವಗಂ ಚಕ್ರವರ್ತಿ !

ಕೌರವ— ಯುಗಪುರುಷ, ನೀನ್ನೈತಂದ ಕಜ್ಜಮೇನ್ ?

ದ್ವಾಪರ— ಎನ್ನಾಳ್ಕೆ ಕೊನೆಗಂಡುದಿಂದಿಗೆ. ನಿನ್ನಾಣತಿಯಂ ಪಡೆದ
ಬೀಳ್ಕೊಳೆ ಬಂದಿಹೆನ್.

ಕೌರವ— ಅದರ್ಕೆನ್ನನೇನ್ ಕೇಳ್ಪುದು? ಪಾಂಡವರಿರ್ಪರ್! ಧರ್ಮರಾಯ
ನಿರ್ಪನ್! ಆ ಕೃಷ್ಣನಿರ್ದಪನ್! ಈಗಳವರಲ್ತೆ ಚಕ್ರವರ್ತಿಗಳ್

ದ್ವಾಪರ— ನೀನಿರ್ಪನ್ನೆವರಂ ಮಿಕ್ಕವರ್ ಸಾರ್ವಭೌಮರೆಂತಪ್ಪರ್ ? ಎನ
ನೀನೆ ಸಾರ್ವಭೌಮಂ! ಎನಗೆ ನೀನೆ ಚಕ್ರವರ್ತಿ ! ನೀನೆನಗಿನ್ನು
ಕೌರವ ಕುಲೇಂದ್ರನ್ ! ಬೀಳ್ಕೊಳ್ಳುವೆನ್. ದಯಪಾಲಿಸಾಜ್ಞೆ
ಯಂ. ಆಗಳೆಯೆ ಕಲಿಗಿತ್ತೆನಧಿಕಾರಮಂ. ಪೋಗಿ ಬರಲೇನ್

ಕೌರವ— ಪೋಗಿಬಾ, ದ್ವಾಪರದೇವ. ಆನುಂ ಪೋಗಿ ಬರ್ಪೆನ್.

ದ್ವಾಪರ— ಅಂತಕ್ಕೆ ; ನಾಮಿರ್ವರಿನ್ನೊಮ್ಮೆ ಸೇರುವಂ. [ಹೋಗುತ್ತಾನೆ.]

ಕೌರವ— ಅಂತಲ್ಲದಿನ್ನೇನ್ ?
ನಾಮೆಲ್ಲರುಂ ಮರಳಿ ಬರಲ್ಕೆಂದೆ ಪೋಪವರ್ !
[ಸ್ವಲ್ಪ ಹೊತ್ತು ಮೌನವಾಗಿದ್ದು ಉದ್ರೇಕದಿಂದ]
ಧರ್ಮಂ! ಅಧರ್ಮಂ!
ಧರ್ಮಿಗಳಾರ್ ? ಅಧರ್ಮಿಗಳಾರ್ ?
ಆಹಾ, ಧರ್ಮಸಂಸ್ಥಾಪನಕಲ್ತೆ ಆ ಕೃಷ್ಣನ್ !

ಧರ್ಮಕ್ಕೆ ಬೆಂಗೊಟ್ಟು ಪೊರೆದನಲ್ತೆ ಆ ಕೃಷ್ಣನ್ ?
ಆ ಬಡ ಗೋಪನ್
ಆ ಪಚ್ಚಪಸಿಯ ತುರುಕಾರನ್ ?
ಅಸಂಸ್ಕೃತಂ, ಅನಾಗರಿಕನ್ !—
ಇರ್ಕೆ,—
ನಾನೆಂತುಂ ಅರಗುಲಿ, ಇರ್ಕೆ,
ಪಾಂಡವರೊ ?
ಅದಾವ ಧರ್ಮಮಂ ಪಿಡಿದರ್ ?
ಮುದುಕನನ್ ಭೀಷ್ಮನಂ ಬೇಡಿ ಕೊಂದರ್ ;
ಒಳಸಂಚುಗಳಂ ನಡೆಸಿ ಕಡೆಗಾಣ್ಚಿದರ್ !
ಎಮ್ಮೆಲ್ಲರ್ಗಮಾಚಾರ್ಯನ್, ಆ ದ್ರೋಣನನ್
ಛದ್ಮನೆಯಿಂದೆ ಪರಲೋಕಕಟ್ಟಿದರ್ !
ಕರ್ಣನನ್—(ಮರುಗುತ್ತಾನೆ)
ಆ ಎನ್ನ ನೆಚ್ಚಿನ ಕರ್ಣನನ್,
ಬರ್ದಿಲರುಂ ಪೂಜಿಸುವ ಆ ಸೂರ್ಯಪುತ್ರನನ್
ಕಂಡಂತೆ ಕಣ್ಣೆದುರೊಳೆ ಕೈತವದಿ ಕೊಂದರ್ !
ಎನ್ನುಮಂ ಮಲ್ಲಗಾಳೆಗಕೆ ತಗದ ರೀತಿಯೊಳೆ
ತೊಡೆಯುಂ ಪೊಯ್ದು ಕೆಡಪಿದರ್.—
ಇವರೆಲ್ಲರುಂ ಧರ್ಮಿಗಳ್ ?
ನಾನೊರ್ವನ್ ಅಧರ್ಮಿ !
ಇದೆಲ್ಲಂ ಆ ಕೃಷ್ಣನ ಕುಹಕಂ !
ಕೈತವದ ಶಿಕ್ಷಾಗುರುವಲ್ತೆ ಆತನ್ ?—(ಕೋಪದಿಂದ)
ಎಲವೋ ಕೃಷ್ಣಾ ! ಕೃಷ್ಣಾ ! ಕೃಷ್ಣಾ !

(ಕೃಷ್ಣನು ಥಕ್ಕನೆ ಪ್ರತ್ಯಕ್ಷನಾಗುತ್ತಾನೆ.)

ಕೃಷ್ಣ—ರಾಜೇಂದ್ರ, ಬಂದೆನಿದೊ !

(ಕೌರವನು ನಸು ತಲೆಯೆತ್ತಿ ನೋಡಿ, ಸಂಶಯ ದೃಷ್ಟಿಯನ್ನು ಬೀರಿ)

ಕೌರವ—ನೀನಾರಯ್ ?

ಕೃಷ್ಣ—ನೀನೀಗಳೆ ಕರೆದಾ ಕೃಷ್ಣನ್ !

(ಕೌರವನ ಮುಖ ವಿಕಟ ಕರ್ಕಶವಾಗುತ್ತದೆ. ಔಡುಗಚ್ಚುತ್ತಾನೆ. ಬುಸುಗುಟ ತ್ತಾನೆ. ಸರ್ಪ ಹೆಡೆಯೆತ್ತುವಂತೆ ಅರ್ಧಮೇಲೆದ್ದು ಕೈಮೇಲೆ ಒರಗುತ್ತಾನೆ.)

ಕೌರವ—ಆರೊ ಕರೆದರ್ ನಿನ್ನನ್? ಎನ್ನೀ ಕೀಳ್ಪಡೆಯಂ ಕಂಡ
ನಗಲ್ಕೆಂದ್ಬೈತಂದೆಯೇಂ?

ಕೃಷ್ಣ—(ಮುಗುಳ್ನಗೆಯಿಂದ) ಕೌರವೇಂದ್ರಾ, ನೀನೆನ್ನನ್ ಪೆಸರ್ ಕೂ
ಕರೆದೆಯಲ್ತೆ?

ಕೌರವ—ಕೂಗಿದೆನೊ, ಕರೆದೆನಲ್ತು! ನೀನ್ ಗೈದ ಕಪಟಮಂ ನೆನೆ
ನೆನೆದು ಸಿಗ್ಗಿನಿಂ ಹೊಡೆಯ್ವುರಿಯಿಂ ಕೂಗಿದೆನೊ, ಕರೆದೆನಲ್ತು
"ಕೃಪಾಕರ, ಮುರಾರಿ, ಕರುಣಾಸಾಗರ, ಬಾ, ಪೊರೆಯುಯ್
ಎಂದೀ ಮಹಾನುಭಾವನನ್ ಮೊರೆದು. ಕರೆದೆನಲ್ತು!—ಬಂದ
ಬಟ್ಟೆಯೊಳೆ ಮರಳೊ! ತೊಲಗಿಲ್ಲಿಂ, ನೀಚ! ನಿಲ್ಲದಿರ್ ನನ್ನೆ
ದುರ್! ತೊಲಗೋ, ಕಣ್ ಬೇನೆ ಬರ್ಪುಂ!

~~ಕೌರವ~~—ಸಾವಧಾನಂ! ಚಕ್ರವರ್ತಿ, ಸಾವಧಾನಂ!

ಕೌರವ—ಎಲವೋ ದುರಾತ್ಮಾ, ಚಕ್ರವರ್ತಿ ಎಂದೆನ್ನಂ ಹಂಗಿಪೆಯೇನ್?
ಎನ್ನ ಚಕ್ರಾಧಿಪತ್ಯಮಂ ಪಾಳ್ಗೆಯ್ದು ಕೇಡಿಗನ್ ನೀನಲ್ತೆ?

ಕೃಷ್ಣ—ರಾಜೇಂದ್ರ, ಪಾಳ್ಗೆಯ್ದ ಕೇಡಿಗನ್ ನಾನಲ್ತು;
ನೀನೆ ನಿನ್ನಂ ಕೇಡಿಗೀಡುಮಾಡಿದೆಯಲ್ತೆ?
ಮಚ್ಚರದಿ ಪಾಂಡುಸುತರಂ ಜೂದಿನ ವ್ಯಾಜದಿಂ
ಮೋಸದಿಂದಡವಿಗಟ್ಟಿದ ಪಾಪಿ ನಾನಲ್ತು.
ದ್ರೌಪದಿಯ ಮಾನಮಂ ರಾಜಸಭೆಯೊಳ್ ನೆರೆದ
ಮಹಾಜನಗಳೆದುರಿನೊಳೆ ಭಂಗಿಸಿ, ಧರ್ಮಮಂ
ಕೆಣಕಿದವನಾನಲ್ತು. ಪಾಂಡುಸುತರಿಗೆ ನೆಲಮಂ
ಕೊಡು ಎಂದು ನಾನ್ ಬಂದು ಬೇಡೆ ಕಿವುಡುಗೇಳ್ದು,
ಹಿರಿಯರೊಳ್ನುಡಿಗಳಂ ಕಡೆಗಣ್ಚಿ, ಸಮರಮಂ
ಪೊತ್ತಿಸಿದವನ್ ನಾನಲ್ತು. ನೀನೆ ಕಾರಣಂ!
ನಿನ್ನಿಂದಲೇ ಈ ಕುರುಕ್ಷೇತ್ರ ರಣರಂಗಂ
ನೋಡೀಗಳೆಂತು ರುದ್ರಭೂಮಿಯಾಗಿರ್ಪುದು!
ನಿನ್ನಿಂದಲೇ ಕರ್ಣ ಭೀಷ್ಮ ದ್ರೋಣಾದಿಗಳ್,

ದ್ವಾಪರಯುಗದ ಅನರ್ಘ್ಯರತ್ನಂಗಳ್ ನುಚ್ಚಿಳ್ದು
ಪೋಗಿರ್ಪವೈಸೆ ?

ಕೌರವ– (ಉಕ್ಕುವ ಸಿಟ್ಟಿನಿಂದ) ಓ ಮಾರಿ ! ಮಾಯಾವಿ !
ಎಲವೋ ಕೊಲೆಪಾತಕಾ, ರಣರಕ್ತ ರಾಕ್ಷಸಾ,
ಗಳಪದಿರ್ ಎನ್ನೆದುರೀ ತಿಕ್ತವಾಕ್ಯಂಗಳಂ !
ಎಲವೋ ಮಸಣಗಾಹಿ, ನಾನಲ್ತೆ ಕೊಂದವನ್ ?
ನಾನಲ್ತೆ ಪೆರ್ಬ್ಬಡೆಯ ಬೀರರ್ಕಳಂ ತಿಂದ
ಪೆಣದಿನಿ ? ಇರ್ಕೆಲದ ಸುಭಟರ್ಕಳೆಲ್ಲರಂ
ಅಸುವೀಂಟಿ ಸುಡುಗಾಡುಗೈದವನ್ ನಾನಲ್ತೆ ?—
ಓ ಹುಟ್ಟುನೆತ್ತರುಣಿ, ನೀನಂದು ವಿದುರನ
ಬೀಡಿನಿಂದೆನ್ನ ಆಸ್ಥಾನಕ್ಕೈತಂದಾಗಳೆ
ಪಜ್ಜೆ ಪಜ್ಜೆಗುಂ ಸೂಡುಗಳನೊಟ್ಟಿ, ಮಸಣಮಂ
ಗೈಯುತ್ತೆ ಬಂದೆಯಲ್ತೆ ? ಕಪಟಮಂ ಮರೆಮಾಡಿ
ಗಳಪುವೆಯಾ ಎನ್ನೊಡನೆ ? (ಬುಸುಗುಟ್ಟುತ್ತಾನೆ.)

ಕೃಷ್ಣ— (ಗಂಭೀರವಾಗಿ ತನ್ನಲ್ಲಿಯೆ) ಸಾಲ್ಗುಮೀ ಆಟಂ !
ಕನಸನೊಡೆಯುವ ಪೊಳ್ತು ಬಳಿಸಾರಿರ್ಪುದು.
ಮಾಯಾಮೋಹಂ ಎನಿತು ಕುರುಡುಗೈವುದು ಜಗಮಂ !

(ಕೌರವನನ್ನು ನಟ್ಟ ನೋಟದಿಂದ ದುರದುರನೆ ನೋಡಿ, ಎರಡು ಹೆಜ್ಜೆ ಮುಂಬರಿದು ಶಕ್ತಿಯನ್ನು ಸೂಸುವ ದಿವ್ಯವಾಣಿಯಿಂದ ಹೇಳುತ್ತಾನೆ.)

ವೀರ ಕೌರವಾ, ತತ್ವಜ್ಞಾನಿ ಕೌರವಾ,
ಸಾಲ್ಗುಮೀ ಅಭಿನಯಂ ? ಹೊಂಗನಸನೊಡೆದೇಳ್ !
ಎಚ್ಚತ್ತು ಕಣ್ದೆರೆದು ನೋಡು ! ನೋಡಯ್ !
ಆಟಮಂ ಮರೆವರೇನ್ ಮೂಢರಂತೆ ?

(ಸಾಮಾನ್ಯ ಗುರುಗಳ ಶಕ್ತಿದಾಯಕ ಮಂತ್ರೋಪದೇಶದಿಂದ ಮಾಯೆಯ ಸ್ವಪ್ನ ಒಡೆದು ಜ್ಞಾನೋದಯವಾಗುತ್ತದೆ. ಎಂದಮೇಲೆ, ಸರ್ವಜಗದ್ಗುರುವಾದ ಭಗವಾನ್ ಶ್ರೀಕೃಷ್ಣನ ಅಧಿಕಾರಯುತವಾದ ಮಂತ್ರವಾಣಿಯಿಂದ ಅಸನ್ನವಿಮೋಚನನಾದ ಕೌರವನ ಸುವರ್ಣಸ್ವಪ್ನ ಜಲಬುದ್ಬುದದಂತೆ ಸಿಡಿದೊಡೆಯುತ್ತದೆ. ಇದ್ದಕಿದ್ದ ಹಾಗೆ ಕೌರವನ ಮುಖದಲ್ಲಿ ಶಾಂತಿ ಮೈದೋರುತ್ತದೆ; ಮುಗುಳ್ನಗೆ ಸುಳಿದಾಡುತ್ತದೆ; ಕಣ್ಣರಳುತ್ತದೆ. ನೀಳವಾಗಿ ನಿಟ್ಟುಸಿರೆಳೆದು ಪ್ರಸನ್ನಚಿತ್ತ

ನಾಗಿ ಶ್ರೀಕೃಷ್ಣನನ್ನು ನೋಡುತ್ತಾನೆ. ಶ್ರೀಕೃಷ್ಣನೂ ಮುಗುಳ್ನಗುತ್ತಾನೆ. ಸೂತ್ರಧಾರನೂ ಕಥಾನಾಯಕನೂ ನಾಟಕರಂಗದಿಂದ ನೇಪಥ್ಯಮಂದಿರಕ್ಕೆ ಬಂದಂತಾಗುತ್ತದೆ.)

ಕೃಷ್ಣ— ಸ್ವರ್ಣಸ್ವಪ್ನವನೊಡೆದೆಯಾ, ಕೌರವೇಂದ್ರಾ?

ಕೌರವ— (ಹಸನ್ಮುಖಿಯಾಗಿ) ಜಗದ್ಗುರು, ನಿನ್ನ ಮಂತ್ರಾಘಾತದಿಂದೊಡೆದುದಾ ಸ್ವಪ್ನಂ. (ಸುಯ್ದು) ಕಮಲಾಕ್ಷ, ಸ್ವರ್ಣಸ್ವಪ್ನಮಾದೊಡಂ ಏನ್ ಭಯಂಕರ ಸ್ವಪ್ನಂ!—ಸೂತ್ರಧಾರ, ನಾನೆನ್ನ ಪಾತ್ರಮಂ ನೇರವಾಗಭಿನಯಿಸಿ ತೋರ್ದೆನೇನ್? ಮೇಣ್ ಅದರೊಳೇನಾದರುಂ ತಪ್ಪಿದೆನೊ?

ಕೃಷ್ಣ— ನಟರೊಳ್ ನಟನೆಂದೊಡೆ ನೀನಲ್ತೆ, ಕೌರವಾ! ನಿನ್ನವೊಲಾರುಂ ಅಭಿನಯ ಚತುರರಿನ್ನಿಲ್ಲ. ಏನಭಿನಯಂ! ನಿನ್ನಭಿನಯಕೆ ನಾನೆ ಮಾರುವೋದೆನ್!

ಕೌರವ— ಕರ್ಣನಭಿನಯವನೇನೆಂಬೆ? ಬಲುಸೊಗಸಲ್ತೆ?

ಕೃಷ್ಣ— ನಿನಗೆರಡನೆಯವನಾತನ್! ಆ ದಿನಂ ಕಡೆಯ ಕಾಳೆಗದೊಳ್ ತನ್ನನ್ ತಾನೆ ಮಾರ್ದನವನ್. ನೋಡಿ, ನೋಡುತ್ತೆ ನಾನ್ ಬಲು ಹಿಗ್ಗಿದೆನ್.

ಕೌರವ— ನೀಂ ಕಲಾಕೋವಿದನಲ್ತೆ? ವಿಶ್ವಕವಿಯಲ್ತೆ? (ಮೇಲೆ ನೋಡಿ ಸ್ವಲ್ಪ ಆಶ್ಚರ್ಯದಿಂದ) ಭಗವನ್, ಎತ್ತವೋದುದು ಆ ತಾರಾ ಪರಿಶೋಭಿತ ನೀಲಾಕಾಶಂ? (ಸುತ್ತ ನೋಡಿ) ಶ್ಮಶಾನಮಾಗಿರ್ದ ಆ ಕುರುಕ್ಷೇತ್ರ ರಣರಂಗಮೆಲ್ಲಿ? (ಕಿವಿಗೊಟ್ಟು ಆಲಿಸಿ) ಕಿವಿಬಿರಿಯುವಂತೇಳುತಿರ್ದ ಆಕ್ರಂದನ ಧ್ವನಿಗಳೆಲ್ಲಿ?

ಕೃಷ್ಣ— (ಹಸಿತವದನನಾಗಿ) ಕನಸೊಡೆದ ಮೇಲೆ ಅದರೊಳೇನಿಹುದು, ಕೌರವಕೃಷ್ಣಾ? ಅದೆಲ್ಲಂ ಸವಿಸುಳ್ಳಿನಿಂ ಕೆತ್ತಿರುವ ಪುಸಿಸೊನ್ನೆಯಲ್ತೆ?—ಅದೋ!

(ಪರದೆಯೊಳಗೆ "ಸಂಜಯಾ ದಾರಿ ತೋರು" ಎಂಬ ದನಿಯಾಗುತ್ತದೆ.)

ಅದೋ, ಗಾಂಧಾರಿ ಧೃತರಾಷ್ಟ್ರರ್ ಸಂಜಯನೊಡಗೂಡಿ ಬರುತಿರ್ಪರೀಯೆಡೆಗೆ. ನಾಟಕಮುಂ ನೇರವಾಗಿ ಕೊನೆಗಾಣ್ತು! ನಾನ್ ಪೋಗಿ ಬರ್ಪೆನ್. (ನಡೆಯುತ್ತ) ಅಲ್ಲಿ ನಿನ್ನನ್ ಮರಳಿ ಕಾಣು

ವೆನ್ ! (ಅದೃಶ್ಯನಾಗುತ್ತಾನೆ.)

(ಕೌರವನು ಪುನಃ ಮಾಯೆ ಕವಿದು ನೆಲದಮೇಲೆ ಬಿದ್ದು ನರಳುತ್ತಾನೆ. ಸಂಜಯ, ಧೃತರಾಷ್ಟ್ರ, ಗಾಂಧಾರಿ, ಭಾನುಮತಿ ಮೊದಲಾದವರು ಬರುತ್ತಾರೆ.)

ಕೌರವ— (ಹೊರಳುತ್ತ) ಹಾ, ಏನಪಮಾನಂ! ಅಯ್ಯೋ, ಏನೂರುಭಂಗಂ; ಏನಪಮಾನಂ!

ಸಂಜಯ—ಧೃತರಾಷ್ಟ್ರ, ನೋಡಿ ಎಡೆಯೊಳ್ ಪೊರಳ್ದು ನೋಯುತಿರ್ಪನ್ ಕುರುಕುಲ ಸಾರ್ವಭೌಮನ್.

ಧೃತರಾಷ್ಟ್ರ—ಅಪ್ಪಾ, ಮಗೂ, ಎಲ್ಲರ್ಪಯ್ ?

ಗಾಂಧಾರಿ— ಅಯ್ಯೋ ! ಮಗೂ !

ಭಾನುಮತಿ—ಅಯ್ಯೋ ! ಅಯ್ಯೋ !

(ಎಲ್ಲರೂ ಕೌರವನಮೇಲೆ ಬಿದ್ದು ಗೋಳಾಡುತ್ತಾರೆ. ಆ ಭಯಂಕರವಾದ ಶ್ಮಶಾನ ಮೌನದಲ್ಲಿ ಆ ರೋದನಧ್ವನಿ ಕಡಲ ಮೊರೆಯಾಗಿ ಹಬ್ಬುತ್ತದೆ.)

## ದೃಶ್ಯ ೭

[ಮಸಣದೊಂದೆಡೆ. ಕೃಷ್ಣನೂ ವಿದುರನೂ ಮಾತಾಡುತ್ತಿದ್ದಾರೆ.

ಕೃಷ್ಣ— ವಿದುರ, ಕೌರವೇಂದ್ರನನ್ ಕಂಡುಬಂದೆನ್. ಏನ್ ಪೌರುಷ ವಂತನಾತನ್ ! ಛಲದೊಳವಂಗೆಣೆಯನ್ ಕಾಣೆನ್.

ವಿದುರ— ಮಹಾಧೀರನ್ ! ಅಚಲ ಪ್ರತಿಜ್ಞನ್ ! (ದೂರ ನೋಡಿ)—ಆರಲ್ಲಿ ಇತ್ತಲ್ಬೈತರುತಿರ್ಪರ್ ?

ಕೃಷ್ಣ— (ನೋಡುತ್ತ) ಏನ್ ಚಿತ್ರಮಯಂ ಈ ಶ್ಮಶಾನಂ!—ಸಹದೇವ ನಾತನ್ !—ಕುಂತಿಯಲ್ಲವೆ ಆಕೆ?

ವಿದುರ— ಅಹುದೆಂದೇ ತೋರ್ಪುದು. ಏನನೋ ಪುಡುಕುತಿರ್ಪಂತೆ ತೋರ್ಪುದಲ್ತೆ ?

ಕೃಷ್ಣ— ಕೂಸಂ ತೊಟ್ಟಿಲಿಂ ತೆಗೆದೊಗೆದ ತಾಯಿ, ಮಸಣದೊಳ್ ಕಾಣಲ್ಕೆ ವಂದಿರ್ಪಳ್, ತನ್ನ ನಚ್ಚಿನ ಕುವರನನ್ !

ವಿದುರ— (ಆಶ್ಚರ್ಯದಿಂದ) ನೀನ್ ಪೇಳ್ವುದೇನ್ ? ಆರನ್ ಕಾಣಲ್ಕೆ ಬಂದಿರ್ಪಳ್ ?

ಕೃಷ್ಣ— ಮತ್ತಾರನ್ ? ರಣಧೀರನ್ ದಾನಶೂರನ್ ಕರ್ಣನನ್ !

ವಿದುರ— ಕರ್ಣನ್ ! ಕುಂತಿಯ ಪುತ್ರನ್! ಏನ್ ಮಾತಿದು, ಕೃಷ್ಣಾ ?

ಕೃಷ್ಣ— ನೀನರಿದುದಿಲ್ಲ, ಮೇಲ್ಗತೆಯ ಎರ್ದೆಯೊಳೆನಿತು ಒಳಗತೆಗಳಾಡುತಿಹವೆಂಬುದನ್ ನೀನರಿದುದಿಲ್ಲ; ಇತ್ತ ಬಾ, ಪೇಳ್ವೆನೆಲ್ಲಮನ್. ಆಲಿಸವರಾಡುತಿರ್ಪಾ ನುಡಿಗಳನ್.

ವಿದುರ— ಇಂದೇನ್ ಆಶ್ಚರ್ಯದ ಮೇಲಾಶ್ಚರ್ಯಂ!

ಕೃಷ್ಣ— ಇಂದೆಲ್ಲರ್ಗಂ ಪಸುಗೆಯ ಪೊಳ್ತು. ಬಾ, ಕೆಲಸಾರ್ವಂ.

(ವಿದುರನೂ ಕೃಷ್ಣನೂ ಮರೆಯಾಗುತ್ತಾರೆ. ಸಹದೇವನೂ ಕುಂತಿಯೂ ಹೆಣಗಳನ್ನು ಪರೀಕ್ಷಿಸುತ್ತ ಬರುತ್ತಾರೆ.)

ಸಹದೇವ— ಇತ್ತಲಿತ್ತಲ್, ತಾಯೆ.

ಕುಂತಿ— ಮಗೂ, ಎಂತಹ ಬಸಿರೆನ್ನದು? ಅಂದು ಸುಡುಗಾಡಂ ಬೆಸಲೆಯಾದೀ ಬಸಿರ್, ಇಂದು ಸೂಡಿನ ಬೆಂಕಿಯಿಂ ಬೇಗುದಿಗೊಳ್ಳುತಿಹುದಲ್ಲಾ!

ಸಹದೇವ— (ತಿಳಿದೂ ತಿಳಿಯದವನಂತೆ) ತಾಯೆ, ನೀವಾರನ್ ಇಂತುಟರಸುವಿರಿ? ಪೇಳಲೊಲ್ಲಿರೇನ್ ಎನಗಂ? ತಿಳುಪಿದೊಡಾತನನ್ ಬೇಗದಿಂ ತೋರಲೆಳಸುವೆನ್. ನೀವರಸುವನ್ ಪೆಸರಾಂತ ಬೀರನೊ? ಸಾಮಾನ್ಯ ಭಟನೊ?

ಕುಂತಿ— (ನಿಡುಸುಯ್ದು) ಪೆಸರಾಂತ ವೀರನ್, ಕಂದಾ, ನೆಲದರಿಕೆಯ ಕಲಿಯಾತನ್! ಕೀರ್ತಿಕಾಂತಿಯಿಂ ಸೂರ್ಯದೇವನನ್ ಮೀರಿಹನಾತನ್! ರಣದೊಳ್ ರೋಷಭೀಷಣ ಕಲ್ಮೆಯಂ ತೋರ್ದನಾತನ್! ದಾನಮಂ ಬಿಡುಗೈಯಿಂ ಬೀರಿದವನಾತನ್!

ಸಹದೇವ— ಆರದು? ದಾನಶೂರನ್ ಕರ್ಣನೇನ್?

ಕುಂತಿ— (ಬಿಕ್ಕಿ ಬಿಕ್ಕಿ ಅಳುತ್ತ) ಅಹುದು, ಮಗೂ, ಕರ್ಣನ್! ಆ ಎನ್ನ ಕೌಮಾರ ಪ್ರಣಯದಿಂದೊಗೆತಂದ ಎನ್ನ ಕಣ್ಮಣಿ ಕರ್ಣನ್! ಪಿರಿಯ ಮಗನ್! ನಿಮಗೆಲ್ಲರ್ಗಂ ಪಿರಿಯನ್!

ಸಹದೇವ— (ಅಚ್ಚರಿಯಂ ನಟಿಸಿ) ತಾಯೆ, ನೀಂ ಪೇಳ್ವುದಿದೇನ್? ನಿಮಗೆ ಮಗನೆಂತು ಕರ್ಣನ್?

ಕುಂತಿ— ಮಗೂ, ನೊಂದ ಬಸಿರಂ ಕೆಣಕದಿರ್! ಎನ್ನೊಡಲೊಳ್ ನರಕಮನೆಚ್ಚರಿಸದಿರ್!—ತೋರಯ್, ಕರ್ಣನನ್ ತೋರಯ್!

[ಸಹದೇವನು ಸ್ವಲ್ಪ ಮುಂದೆ ಹೋಗಿ ಕರ್ಣನ ದೇಹವನ್ನು ನೋಡಿ ಇನಿ ತಳುಕಿ ನಿಂತು ಕೈಬೆರಳಿಂದ ತೋರುತ್ತಾನೆ. ಕುಂತಿ ಗೋಳಿಡುತ್ತ ಕಳಚಿಕೊಂಡು ಬೀಳುತ್ತಾಳೆ ಕರ್ಣನ ಶವದ ಮೇಲೆ.]

ಸಹದೇವ— ಏನ್ ಕರಾಳ ಲೀಲೆಯಿದು! (ತಲೆಗೊಡಹಿ ಧೀರವಾಗುತ್ತಾನೆ.)

ಕುಂತಿ— ಅಯ್ಯೊ, ಕಂದಯ್ಯ, ಏನಾಗಿ ಪೋಗಿರ್ಪಯ್!
ಹೆತ್ತು ಹೊಳೆಗಿತ್ತ ನಿನ್ನನ್
ಸತ್ತ ಸುಡುಗಾಡಿನೊಳ್ ಮತ್ತೆ ಮುದ್ದಿಪಂತಾಯ್ತು?
ಕನ್ನೆತನದಾ ಲೀಲೆ ಕಣ್ಣನಿರಿವಂತಾಯ್ತು!
ನಿನ್ನನೀ ಪಾಡಿಗೀಡುಮಾಡಿದ ಪಾಪಿಯನ್
ಮನ್ನಿಸೈ.—ಗುರುದೇವ, ಗುರುದೇವ,
ಓ ದೂರ್ವಾಸ,
ನೀನಿತ್ತ ವರಂ ಪೆತ್ತ ಪಣ್ಣನಿದನೀಕ್ಷಿಸಯ್!
ಕಣ್ತುಂಬಿ ಕಾಣಯ್
ನಿನ್ನ ಕಿಡಿಯುರುಪಿ ಮುಸಣಂಗೈದ ತೋಂಟಮುನ್!
ಭಾರತಮನಿಂತು ಮುಸಣಮುಂ ಮಾಡಲೆಂದೇ
ನಿನ್ನನ್ ನಾನ್ ಪೆತ್ತೆನಲ್ತೆ?
ಓ ಎನ್ನೆದೆಯ ಮಗುವೇ,
ಓ ಎನ್ನ ಬಯಕೆಗಿಡಿಯೇ,
ಮರಳಿ ನೀನೆನ್ನ ಬಸಿರಿಂ ಬಾರೆಯಾ? ಪೇಳ್ಳೈ!—
ಓ ಕಂದಾ, ನಿನ್ನ ಮಿತ್ರನ್ ಕೌರವೇಂದ್ರನಲ್ತು
ನಾನೆ ಕಾರಣಮಲ್ತೆ ಈ ಮಾರಿಯಾತಣಕೆ,
ಈ ಕುರುಕ್ಷೇತ್ರ ಸಮರದೀ ಮಾರಿಯೌತಣಕೆ?
ಓ ಗಂಗಾಮಾತೆ, ನಿರ್ಮಲಾಂತಃಕರಣೆ,
ನಾನಂದು ನಿನಗೆ ಕೈಯೆಡೆಯಿತ್ತ ಕಂದನನ್
ಇಂದು ಬಾರಾ, ನೋಡಾ, ಇಲ್ಲಿ ಏನಾಗಿರ್ಪನ್!
ಪಾಪಿಷ್ಠೆ ಪೆತ್ತೀತನಂ ಅಂದು ನೀನ್ ಪೊರೆದೆ;
ನೀನಿಂದುಂ ಪೊರೆಯಲಾರೆಯಾ, ಓ ಪುಣ್ಯಮಯಿಯಾ!—
ಮಗೂ, ಮಗೂ, ನಾಂ ಗೈದ ಮೊದಲ ತಪ್ಪಿಗೆ ಬಿದಿ

ನಿನ್ನನೇತರ್ಕೆ ಪೇಳ್ದುದಿಂತು?
ಎನ್ನ ಪಾಪಕೆ ನಿನ್ನ ಜೀವನಂ ಬಲಿಯಾಯ್ತೆ?
ಅರಸುಗಳ ಬಳಿಯೊಳೆ ಬಂದ ನಿನ್ನನ್ ನಾನ್
ಸೂತಕುಲದೊಳ್ ತಿರುಗುವಂತೆಸಗಿದೆನ್;
ಮನ್ನಿಸಯ್; ಅಪರಾಧಮಂ ಮನ್ನಿಸಂಯ್!—
ಓ ಕಂದಾ, ನೀನಂದು ಹಸ್ತಿನಾವತಿಯೊಳ್,
ಪಾಂಡವರ್ ಕೌರವರ್ ಬಿಲ್ಬಿಜ್ಜೆಯಂ ಮೆರೆವ
ಪೊಳ್ತಿನೊಳ್ ನಿನ್ನ ಕೈಚಳಕಮಂ ತೋರಲೆಂದು
ರಂಗಕೈತಂದಾಗಳ್ ನಾಂ ನೋಡುತ್ತೆ ಹಿಗ್ಗಿದೆನ್;
ಎನ್ನ ತಪ್ಪನ್ ನೆನೆದು ನಡುಗಿದೆನ್!
ನೆರೆದ ಬೀರರ್ ನಿನ್ನನ್ ಸೂತಕುಲದವನೆಂದು
ತೆಗಳೆ, ನೀನ್ ಮೊಗಮನಿಳಿಕೆಗೈದಯ್!
ನಾನದನ್ ಕಂಡೊಡನೆ ಮುಚ್ಚೆವೋದೆನ್.
ಆಗಳಾದೊಡಮಾನ್ ನನ್ನಿಯಂ ಪೊರಗೆಡಪಿ
ಮರಳಿ ನಿನ್ನನ್ ಪಡೆಯಬಹುದಿತ್ತು. ಆದೊಡಂ,
ಜನಪದದಪವಾದಂ ಬರ್ಕುಂ ಎಂಬ ಪುಸಿನಾಣ್ಗೆ
ಎರ್ದೆಯೊಳುರ್ಕಿದ ಮಗುವಿನಳ್ಕರಂ ಮುಗ್ಗಿಸಿದೆನ್!
ಅಳಿಸಿದೆನ್! ಅಯ್ಯೋ ನಿನ್ನ ಬಾಳನ್ನಳಿಸಿದೆನ್!
ಓ ಕೃಷ್ಣಾ, ನಿನ್ನ ನುಡಿಯನ್ ಕೇಳ್ದು ಕೆಟ್ಟೆನ್:
ನನ್ನ ಮಗುವನ್ ನಾನೆ ಸುಲಿದು ಕೊಂದೆನಲ್ತೆ?
ಅಯ್ಯೋ ನಿನ್ನಾಣತಿಯನೆಸಗಲೆಂದುಜ್ಜುಗಿಸಿ
"ತೊಟ್ಟ ಸರಳನ್ ಮರಳಿ ತೊಡದಿರ್" ಎಂದು
ಸೂರುಳಂ ಗೈವಂತೆ ಮಾಡಿದೆನ್.
ನನ್ನ ಮಗುವನ್ ನಾನೆ ಮಿಳ್ತುವಿಗೀಡುಮಾಡಿದೆನ್.
ಓ ಬಿದಿಯೆ, ಸುಡು ಎನ್ನ ತಾಯ್ತನಮಂ!
ಮಗನೇ, ಅರಿಯದಬಲೆಯನೆಲ್ಲರುಂ ಇಂತು
ವಂಚಿಸಿದರಲ್ತೆ? ನಿನ್ನನ್ ಕೊಂದರಲ್ತೆ?
ನೀನುಂ ಇಂತೆನ್ನಂ ವಂಚಿಸಿ ಎತ್ತ ಪೋದಯ್?

ಓ ಪಾರ್ಥ, ಹೆತ್ತವಳ ಕಣ್ಣ ನಿಂತಿರಿವರೇನ್ ?
ಓ ಕಂದಾ ! ಓ ಕರ್ಣಾ ! ಅಯ್ಯೋ !

(ದೃಶ್ಯ ಬದಲಾಯಿಸುತ್ತದೆ.)

## ದೃಶ್ಯ ೮

[ಮುದುಕಿ ಮಗನನ್ನು ಎಲ್ಲಿಯೂ ಕಾಣದೆ ಬಳಲಿ ಬರುತ್ತಾಳೆ.]

ಮುದುಕಿ— ಇದೇನ್ ಮಾರಿಯಾಟಂ? ಇನಿತು ಜನಂ ತಿರುಗುತಿರ್ಪ ಈ ಕತ್ತಲೆಯ ಬಯಲಿನೊಳ್ ನನ್ನನ್ ಕೇಳ್ವರೆ ಇಲ್ಲ. ಎಲ್ಲರುಂ ಪುಡುಕುತಿರ್ಪರೆ ಪೊರತು, ತೋರ್ಪರನ್ ಕಾಣೆನ್. ಓ ನಾರಾಯಣಾ, ಎಲ್ಲಿರುವಯ್ ? ನುಡಿಯಯ್—ಮಕ್ಕಳಿಲ್ಲದ ಮುದ್ದುಕರನ್ ಕೇಳ್ವರಾರ್ ? ಮಗೂ, ನೀನ್ ನನ್ನೊಡನಿರಲ್ ಎಲ್ಲರ್ಗಂ ನಾನ್ ನಚ್ಚಿನವಳಾಗಿರ್ದೆನ್. ನೀನ್ ತುಳಿಲಾಳೆಂದು ತಿಳಿದು ದೊರೆಯ ಸೇನಾಧಿಕಾರಿಗಳುಂ ನನ್ನೆಡೆಗೆ ಬಂದು ನೂರಾರು ಸವಿನುಡಿಗಳಿಂ, ಕವಡಾಸೆಗಳಿಂ ಬೆನ್ನನ್ ತಟ್ಟಿ ಬೋಳೈಸಿ, ದೇಶಾಭಿಮಾನಂ ಸ್ವಾಮಿಭಕ್ತಿ ಧರ್ಮನಿಷ್ಠೆ ಕ್ಷಾತ್ರ ಧರ್ಮಂ ಮೊದಲಹ ಸಮಯಕ್ಕೊದಗುವ ಉಪಾಯವೇದಾಂತ ಮಂ ಪೇಳ್ದು ನಿನ್ನನ್ ಕೊಂಡೊಯ್ದರ್. ನಾನುಂ ಮಾತಿಗೆ ಮರುಳಾದೆನ್. ಈಗಳೆಲ್ಲಿ ಆ ತತ್ತ್ವಂಗಳುಂ, ಆ ಅಧಿಕಾರಿಗಳುಂ, ಆ ಭಕ್ತಿಧರ್ಮಾಭಿಮಾನಂಗಳುಂ? ಎಲ್ಲ ಬಗುವುಸಿಯಲ್ತೆ ? ತಿಳಿಯದವರ್ಗೆ ತಿಳಿದವರೊಡ್ಡುವ ಬಲೆಯುರುಳ್ಗಣ್ಣಿಗಳಲ್ತೆ ? ಅಂತುಂ ಶ್ರೀಮಂತರ ಕಲಹಾಗ್ನಿಗೆ ಯಜ್ಞಪಶುಗಳೆಮ್ಮಂತಹ ದರಿದ್ರರಲ್ತೆ ?—

(ಮುದುಕಿ ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತು ಚಿಂತಿಸುತ್ತಾಳೆ. ಮಾತೆಯೂ ಕಂದನೂ ಪ್ರವೇಶಿಸುತ್ತಾರೆ.)

ಕಂದ— ಅಮ್ಮಾ, ನಾನಿನ್ನು ನಡೆಯಲಾರೆ !

ಮಾತೆ— ಬಾ ಮಗೂ, ಎತ್ತಿಕೊಳ್ವೆನ್. (ಎತ್ತಿಕೊಂಡು ಮುಂದೆ ನಡೆದು ಮುದುಕಿಯನ್ನು ಕಂಡು) ಯಾರಲ್ಲಿ ? (ಹತ್ತಿರ ಹೋಗಿ ನೋಡಿ)

ಅಜ್ಜೀ, ಇದೇಕಿಲ್ಲಿ ಕುಳಿತಿರುವೆ?

ಮುದುಕಿ— (ತಲೆಯೆತ್ತಿ ನೋಡಿ) ತಾಯಿ, ನನ್ನ ಮಗು ನಾರಾಯಣನನ್ ಹುಡುಕಿ ಹುಡುಕಿ ಸೋತು ಸುಣ್ಣವಾದೆ. ಅಯ್ಯೋ ಎಲ್ಲಿರ್ಪನೋ ಏನೋ? ಪೇಳ್ವರಿಲ್ಲ, ಕೇಳ್ವರಿಲ್ಲ; ನನ್ನಗಿನ್ನೇನ್ ಗತಿ? ಪೇಳಮ್ಮಾ! ಕಡೆಗಾಲದೊಳ್ ಕಲ್ಲೆಡವಿದಂತಾಯ್ತು. (ಕೂಸನ್ನು ನೋಡಿ) ತಾಯಿ, ಈ ಮಗುವನೇಕೆ ಇಲ್ಲಿಗ್ಗೆಳೆತಂದಿರುವೆ? ಈ ರಾತ್ರಿಯ ರುದ್ರಭೂಮಿಗೆ?

ಮಾತೆ— ಅಜ್ಜೀ, ಗುಡಿಸಲೊಳಾರುಮಿಲ್ಲ; ಇವನನ್ ಬಿಟ್ಟರೆನಗಿನ್ನಾರುಂ ಗತಿಯಿಲ್ಲ. ಕದನಕ್ಕೈತಂದ ನನ್ನ ಪತಿಯನರಸಿ ಬಂದಿಹೆನು.— ಈ ಹೆಬ್ಬಯಲಿನ ಹೆಣದ ಬಣಬೆಯೊಳು ಕಾಣಿಸಧ್ದೇನುಂ!

ಮುದುಕಿ— ನಿನ್ನ ಪತಿ ಆರ ಕಡೆಯವನ್?

ಮಾತೆ— ಪಾಂಡವರ ಪಕ್ಷದವನ್.—ನಿನ್ನ ಪುತ್ರನ್?

ಮುದುಕಿ— ಕೌರವನವನ್.

ಮಾತೆ— ನಿನ್ನ ಮಗನೆನ್ನ ಪತಿಗೆ ಪಗೆಯಾಗಿರ್ದನೇನ್?

ಮುದುಕಿ— ಆರಿಗಾರು ಪಗೆ? ನಿನಗಾನ್ ಪಗೆಯೆ?

ಮಾತೆ— ಉಂಟೇ?

ಮುದುಕಿ— ನಮ್ಮವೋಲಿಹ ಬಡಜನಂಗಳೆಲ್ಲ ಮುಂಕುಗಳಮ್ಮಾ. ಪಾಂಡವರ್ ಕೌರವರ್ ನೆಲಕೆ ಪೊಯ್ದಾಡಿದರೆ ನಮ್ಮ ಮಕ್ಕಳ್ ಅವರಿವರಂ ಕೆಳೆಗೊಂಡು ನಿಂತು ಹೆಮ್ಮೆಗೆ ಬಡಿದಾಡಿ ಮಡಿಯುವರ್.— ನನ್ನ ಮಗುಗೆ ನಿನ್ನಾತನಮೇಲೆ ಪಗೆಯೇನ್?—ನಾವಿರ್ವರುಂ ದುಃಖಾರ್ತರಮ್ಮಾ! ಬಾ ಹುಡುಕಿ ನೋಡುವಂ.

(ಇಬ್ಬರೂ ಹೆಣಗಳ ನಡುವೆ ಕತ್ತಲಲ್ಲಿ ಸ್ವಲ್ಪ ಸ್ವಲ್ಪ ದೂರದಲ್ಲಿಯೆ ತಿರುಗುತ್ತ ಹುಡುಕುತ್ತಾರೆ. ಒಂದೆಡೆ ಮಾತೆ ನಿಂತು ಚೀರಿ ಮಗುವನ್ನು ಕೆಳಗಿಳಿಸಿ ರೋದಿಸುತ್ತಾಳೆ. ಅಲ್ಲಿ ಇಬ್ಬರು ಭಟರು ಒಬ್ಬರನ್ನೊಬ್ಬರು ಭರ್ಜಿಗಳಿಂದ ತಿವಿದು ಮಡಿದಿದ್ದಾರೆ. ಒಬ್ಬನು ಮುದುಕಿಯ ಮಗನು. ಮತ್ತೊಬ್ಬನು 'ಮಾತೆ'ಯ ಪತಿ. ಮುದುಕಿ ರೋದನವನ್ನು ಆಲಿಸಿ ಓಡಿಬರುತ್ತಾಳೆ.)

ಮುದುಕಿ— ಏನಾಯ್ತು ಮಗಳೇ?

ಮಾತೆ— ಅಯ್ಯೋ, ಅಜ್ಜೀ, ನೋಡಿಲ್ಲಿ: ನನ್ನ ಪತಿಯನ್ ಈ ಪಾಪಿ

ತಿವಿದುಕೊಂದಿಹನ್ ಅಯ್ಯೋ—

ಮುದುಕಿ— ಅಯ್ಯೋ, ಅಯ್ಯೋ, ನನ್ನ ಮಗನನ್ ನಿನ್ನ ಪತಿ ತಿವಿದು ಕೊಂದಿಹನಲ್ಲವಮ್ಮಾ! ಅಯ್ಯೋ, ಪಾಂಡವರು ಹಾಳಾಗಲಿ!

ಮಾತೆ— ಅಯ್ಯೋ, ಕೌರವರು ಹಾಳಾಗಲಿ!

(ಇಬ್ಬರೂ ಬಿದ್ದು ಗೋಳಿಡುತ್ತಾರೆ.)

## ದೃಶ್ಯ ೯

[ಕುರುಕ್ಷೇತ್ರ ಶ್ಮಶಾನದ ಒಂದು ಭಾಗದಲ್ಲಿ ಪಾಂಡವ ಪಕ್ಷದವರ ಚಿತೆ. ಭೀಮ, ಅರ್ಜುನ, ಧರ್ಮರಾಯ, ದ್ರೌಪದಿ—ಎಲ್ಲರೂ ಶೋಕ ವಿಹ್ವಲರಾಗಿ ನಿಂತಿದ್ದಾರೆ. ಸೂಡಿನ ಮೇಲೆ ಅಭಿಮನ್ಯು ಘಟೋತ್ಕಚರೇ ಮೊದಲಾದವರ ಶವಗಳಿವೆ. ಇದು ವರೆಗೂ ಕಲ್ಮನಸ್ಸಿನಿಂದಿದ್ದ ಭೀಮನಿಗೆ ಇಂದು ಸೂಡಿನ ಮೇಲಿದ್ದ ಘಟೋತ್ಕಚನ ಶವವನ್ನು ನೋಡಿ ಮರುಕ ಮಿತಿಮೀರಿಹೋಗಿದೆ. ಅಸ್ಪಷ್ಟರೋದನ ಧ್ವನಿ ಎಲ್ಲೆಲ್ಲಿಯೂ ವ್ಯಾಪಿಸಿದೆ.]

ಧರ್ಮರಾಯ—ಭೀಮಸೇನ, ಮೊದಲ್ಗಯ್ದ ಕಜ್ಜಮಂ ಕೊನೆಗಾಣ್ಬ.
ಆದುದಾಯಿತು; ಚಿಂತೆಯಿಂದೇನ್? ಸೂಡಿಂಗೆ
ಬೆಂಕಿಯಿಡು. (ಭೀಮನು ಗೋಳಿಡುತ್ತಾನೆ.)
ನೀನಿಂತು ಗೋಳಾಡಿದೊಡೆ, ಭೀಮ,
ಉಳಿದರಂ ಸಂತಯ್ಪರಾರ್?

ಭೀಮ— ಅಣ್ಣಾ,
ಕೊಲೆಗಾರನ್ ಆನ್ ಎಂಬುದನ್ ಈಗಳರಿತೆನ್.
ಈ ಎನ್ನ ಮುದ್ದು ಶಿಶುಗಳ ಪೆಣಗಳೆಡೆ ನಿಂತು
ಗಾಂಧಾರಿ ಧೃತರಾಷ್ಟ್ರರಳಲಾಳಮಂ ತಿಳಿದೆನ್.

(ಅರ್ಜುನ ಮೊದಲಾದವರು ಅವನೊಡನೆ ರೋದಿಸುತ್ತಾರೆ)

ಧರ್ಮರಾಯ—(ಸ್ವಗತ) ಬೀರರಾದೊಡಮೇನ್? ಸ್ಥಿತಪ್ರಜ್ಞರಲ್ಲದೀ
ಮಾನವರ್ ಕೋಪಮನೆ ಕೆಚ್ಚೆಂದು ಭ್ರಮಿಸುವರ್.
ಕೋಪಂ ಬತ್ತಲೊಡನೆ ಕೆಚ್ಚುಂ ಕರಗುವುದು.
ಕೋಪಮೆಂಬಾ ಮದ್ಯಪಾನಮಿಲ್ಲದೆ ಇವರ್
ಕೊಲೆಗೆ ಕೈಯಿಡಲ್ಅರಿದು!— ಚಿತೆಗೆ ನಾನೇ

ಬೆಂಕಿಯಿಡುವೆನ್.—(ಬೆಂಕಿ ಇಡಲು ಹೋಗಿ ನಿಲ್ಲುತ್ತಾನೆ.)
ಅದಾರಲ್ಲಿ ಬರ್ಪವರ್ ?
ಮಾತೆ ಕುಂತೀದೇವಿ ! ಸೋದರನ್ ಸಹದೇವನ್ !
ಆರನೋ ಪೊತ್ತು ತಂದಪರಲ್ತೆ ?

(ಕುಂತಿ ಸಹದೇವರು ಕರ್ಣನನ್ನು ತರುತ್ತಾರೆ. ಎಲ್ಲರೂ ಆ ಕಡೆ ತಿರುಗಿ ನಿಲ್ಲುತ್ತಾರೆ. ಭೀಮನು ಮರುಕವನ್ನು ತೆಗೆದೊಗೆದು ನಿಂತು ಹುಬ್ಬು ಗಂಟಿಕ್ಕಿಕೊಂಡು ದುರದುರನೆ ಕರ್ಣನ ಶವವನ್ನು ನೋಡುತ್ತಾನೆ.)

ಧರ್ಮರಾಯ—ಸಹದೇವ, ಇದೇನಯ್ ?

ಕುಂತಿ— ಓ ಮಗೂ, ಯುಧಿಷ್ಠಿರಾ, ಕರ್ಣನನ್ ಇದರೊಳೇ
ದಹನಂ ಗೆಯ್ವಂತೆನಗೆ ಕೃಪೆಮಾಡೈ.

ಧರ್ಮರಾಯ— ತಾಯೆ,
ಸುಡುವ ಬೆಂಕಿಗೆ ಕರುಣೆಯಿಲ್ಲ, ಕರುಬಿಲ್ಲ.
ಆದೊಡಂ, ಇದರರ್ಥಮೇನ್ ? ತಿಳಿಯಲೆಳಸುವೆನ್.

ಕುಂತಿ— ಕಂದಾ, ನಾನಾವುದುಮಂ ಪೇಳಲಾರೆನ್ ;
ಎನ್ನಾಸೆಯಂ ನೀನ್ ನಡೆಸಿಕೊಡವೇಳ್ಕುಂ.

ಭೀಮ— (ರೋಷದಿಂದ)
ಏಂ ಮಾಳ್ಕೆಯಿದು, ತಾಯೆ ? ಎಮ್ಮ ಕುಲಘಾತುಕನ್
ಈತನನ್ ನಾವುರಿಪುವುದೆ ? ನೋಡು, ನೋಡಿದನ್ :
ಇವನೆ ಕೊಲೆಗೈದಿರ್ಪ ಅಭಿಮನ್ಯು ಘಟೋತ್ಕಚರ್.
(ಕಣ್ಣು ಅರಳಿಸಿ ಸಹದೇವನನ್ನು ನೋಡಿ)
ಸಹದೇವ, ಇದೇನನ್ ನೀನೆಸಗಿರ್ಪೆ ! ತೊಲಗಿಸಿಲ್ಲಿಂ
ಈ ಮಿಗದ ಪೆಣಮಂ ! (ಕುಂತಿ ಅಳುತ್ತಾಳೆ.)
ಧರ್ಮಜಾ, ರೋದನಕ್ಕೆ
ನೀನ್ನಳುಕಿದೊಡೆ ವಿಲಯಮಪ್ಪುದಿಂದೆ !

ಅರ್ಜುನ— ಅಣ್ಣಾ,
ಅಭಿಮನ್ಯುವನ್ ಬೇಳ್ದ ಬೆಂಕೆ ಕರ್ಣನನ್
ಸುಡಲಾಗದು.—ಈ ಕರ್ಣನಿವನಾರ್ ನಮಗೆ ?

ಭೀಮ— ಪಗೆಯು ಕೆಳೆ ! ಅಭಿಮನ್ಯುವನ್ ಘಟೋತ್ಕಚನನ್
ಮೋಸದಿಂದೊರೆದವನ್ !

ಕುಂತಿ— (ಮರುಗಿ) ಓ ಭೀಮ, ಓ ಅರ್ಜುನ,
ಓ ಎನ್ನ ಕಂದಗಳಿರಾ, ಕೈಮುಗಿದು ಬೇಡುವೆನ್,
ಸೆರಗೊಡ್ಡಿ ಬೇಡುವೆನ್ ಎನ್ನಾಸೆಯಂ ಸಲಿಸಿಂ!
ನಾನ್ ನಿಮಗೆ ತಾಯಿ ಅಹುದಾದೊಡೆ—

ಭೀಮ— ತಾಯೆಂದೆ
ತಿಳಿದಿಂತು ಪೇಳ್ದಪೆನ್.

ಕುಂತಿ— ನಾನ್ ನಿಮಗೆ ತಾಯಲ್ತು:
ಮೇಣಿವಂಗೆ ತಾಯೆಂದು ತಿಳಿದೆನ್ನ ಬಯಕೆಯಂ
ನಯೆಗೈಯಿಂ ವಾದಿಸದಿರಿಂ, ಓ ಎನ್ನ ಪುತ್ರರಿರಾ!

(ಅಶ್ವತ್ಥಾಮನು ಬರುತ್ತಾನೆ)

ಅಶ್ವತ್ಥಾಮ—ಓ ಧರ್ಮಪುತ್ರಾ,
ವೀರನೊರ್ವನ ಕಟ್ಟಕಡೆ ಬಯಕೆಯಂ ಸಲಿಸೆ
ಇಲ್ಲಿಗೈತಂದಿಹೆನ್. ವೀರರಾಗಿಹ ನೀವು
ಎನಗೆ ನೆರವಾಗಿದಂ ನೆರವೇರಿಸಲೆವೇಳ್ಕುಂ.
ಕೌರವೇಂದ್ರನ್ ಮಡಿವ ಮೊದಲೆನ್ನನ್ ಕರೆದು
ಕರ್ಣನನ್ ತನ್ನೊಡನೆ ಸೂಡುಗೈಯಲ್ ಬೆಸಸಿ
ಪೋದನ್. ಪೋದವರ ಬಯಕೆಯಂ ಇರ್ಪವರ್
ಕೈಗೂಡಿಪುದೆ ಧರ‍್ಮಂ!

ಭೀಮ— ಅಶ್ವತ್ಥಾಮ, ಕರ್ಣನನ್
ಕೊಂಡುಪೋಗಯ್. ನೀನಿವಂಗೆ ಸಂಸ್ಕಾರಂ
ಎಸಗುವುದೆ ಧರ್ಮಂ!

ಕುಂತಿ— ಓ ಅಶ್ವತ್ಥಾಮ,
ಕರ್ಣನನ್ ಈ ಎಮ್ಮ ಚಿತೆಯೊಳೇ ದಹಿಪುದಯ್
ಎನ್ನಾಸೆ. ಆ ಬಯಕೆಗಡ್ಡ ಬರಬೇಡಯ್, ತಂದೆ.

ಅಶ್ವತ್ಥಾಮ—ದೇವಿ, ಕೌರವನಾಶೆ! ಮೇಣೆನ್ನ ಬಾಸೆ!
ಕೈಮುಗಿದು ಕೇಳ್ವೆನ್; ಬೀಳ್ಕೊಡಿಂ ಕರ್ಣನನ್.

ಭೀಮ— ತಡವೇನ್? ಕೊಂಡುಪೋಗಯ್, ಅಶ್ವತ್ಥಾಮ!

ಕುಂತಿ— (ಭೀಮನ ಕಡೆ ತಿರುಗಿ ಹೇಳುತ್ತಾಳೆ.)

ಓ ಭೀಮ,
ತಾಯಿಗೋಸುಗಮಾದೊಡಂ ಕರಗಲಾರೆಯೇನ್ ?
ಬೆಂದೊಡಲ್ಗಿಂತು ಕಬ್ಬೂನಂ ಚುರ್ಚುವರೇನ್ ?
(ಅಶ್ವತ್ಥಾಮನು ಕರ್ಣನನ್ನು ಕೊಂಡುಹೋಗುತ್ತಾನೆ. ಕುಂತಿ ತಿರುಗಿ ನೋಡಿ ಬಿದ್ದು ಗೋಳಾಡುತ್ತಾಳೆ.)
ಓ ಕಂದಾ, ಓ ಕರ್ಣಾ, ನಿನ್ನನಿದಕಾಗಿಯೇ
ಪೆತ್ತೆನೇನ್ ? ನುಮ್ಮನಿರ್ದಪೆ ಏಕೆ, ಓ ಸಹದೇವ ?

ಧರ್ಮರಾಯ—ಇದೇನಿದು ಸಹದೇವ ? ತಾಯಿ ಕರ್ಣನನ್
ಪಡೆದೆನ್ ಎಂದ್ಪಳಲ್ವಳಲ್ಲಾ !

ಸಹದೇವ— ಮನ್ನಿಸೆನ್ನನ್, ಅಣ್ಣಾ ;
ತಾಯಿಯೊಡಲೊಳ್ ಬಂದ ರಾಧೇಯನೆಮಗೆಲ್ಲ
ಪಿರಿಯಣ್ಣನ್ !

ಧರ್ಮರಾಯ—(ಸಿಡಿಲೆರಗಿದವನಂತೆ) ಏನನ್ ಪೇಳ್ದಯ್ ?

ಭೀಮ— ಪುಸಿಯಾಡದಿರ್ !

ಅರ್ಜುನ— ಅಯ್ಯೋ ಏನಾದುದು ಕಡೆಗೆ ?

ಸಹದೇವ— ವಿವರಂ ಅನಂತರಂ. ನಾನ್ ಪೇಳ್ದುದದು ದಿಟಂ !

ಕುಂತಿ— ಓ ಎನ್ನ ಕಂದಾ, ಓ ಕರ್ಣಾ,
ಈಗಳೆವರೆಲ್ಲರುಂ ನಿನ್ನವರೆ. ನಾನೆ,
ಪಾಪಿ, ಪರಕೀಯಳಾದೆನಲ್ತೆ ?
ಲೋಕಮವರಾರನುಂ ನಿಂದಿಸದು. ಎನ್ನನೋ,
ಮಗನ ಕೊಲೆಯಂಗೈದ ಕಡುಪಾಪಿ ಎಂದು
ಪೇಸುವುದು ! (ಅಳುತ್ತಾಳೆ.)

ಧರ್ಮರಾಯ—ತಾಯೇ, ಏನನೆಸಗಿರ್ಪೆ ನೀನ್ ?

ಅರ್ಜುನ— ಓ ಕೃಷ್ಣಾ, ಪುಸಿವೇಳ್ದು ಕೊಲಿಸಿದೆಯಾ !

ಭೀಮ— ಕಡೆಗುಂ ಪೊಲಸಾದುದೀ ಭಾರತ ಸಂಗ್ರಾಮಂ !

(ದೃಶ್ಯ ಮಾಯವಾಗುತ್ತದೆ.)

## ದೃಶ್ಯ ೧೦

[ಕುರುಕ್ಷೇತ್ರ ಶ್ಮಶಾನ. ಎಲ್ಲಿಯೂ ನೀರವತೆ, ಕತ್ತಲು ಕವಿದಿದೆ. ಪೊಂಜುಗಳ ಬೆಳಕಿಲ್ಲ; ಸುಳಿದಾಡುವ ಮನುಷ್ಯಾಕೃತಿಗಳಿಲ್ಲ. ಎಲ್ಲ ಬಟ್ಟಬಯಲಾಗಿದೆ. ಆಕಾಶದ ಅನಂತ ನೀಲಪಟದಲ್ಲಿ ಖಚಿತನಾದ ಸಾವಿರಾರು ನಕ್ಷತ್ರಗಳ ಮಂದಕಾಂತಿ ನಸುಹಬ್ಬಿ ಘೋರ ದೃಶ್ಯವನ್ನು ಘೋರತರವಾಗಿ ಮಾಡಿದೆ. ಮಸಣದ ನಡುವೆ ಪಕ್ಕ ಪಕ್ಕದಲ್ಲಿ ಎರಡು ಭಸ್ಮರಾಶಿಗಳಿವೆ. ಒಂದು ಪಾಂಡವಪಕ್ಷ ವಿನಾಶದ ಪ್ರತಿನಿಧಿ; ಇನ್ನೊಂದು ಕೌರವಪಕ್ಷ ವಿನಾಶದ ಪ್ರತಿನಿಧಿ. ಆ ಒಂದೊಂದು ಭಸ್ಮ ಪರ್ವತದ ಮೇಲೆ ಒಂದೊಂದು ಕಾಲಿಟ್ಟುಕೊಂಡು ರುದ್ರಲಯಮೂರ್ತಿಯಾದ ಮಹಾದೇವನು ಉನ್ಮತ್ತನಾಗಿ ಭೀಮಾಕಾರನಾಗಿ ನಿಂತಿದ್ದಾನೆ. ಮುಡಿಗೆದರಿಹೋಗಿದೆ. ಕೊರಳಿನಲ್ಲಿರುವ ಹಾವುಗಳು ಭಯದಿಂದ ಹದುಗಿಕೊಂಡಿವೆ. ಹುಲಿದೊಗಲನ್ನು ತೊಟ್ಟಿದ್ದಾನೆ. ತ್ರಿಶೂಲಧಾರಿಯಾಗಿದ್ದಾನೆ. ಬೂದಿಯ ರಾಶಿಗಳಿಂದ ಆಗಾಗ ಬೂದಿತೆಗೆದುಕೊಂಡು ಬಳಿದುಕೊಳ್ಳುತ್ತಾನೆ—ಒಂದೊಂದು ಸಾರಿ ಬಳಿದುಕೊಳ್ಳುವಾಗಲೂ ಮಹಾಭಾರತದ ಒಬ್ಬೊಬ್ಬ ವೀರಪುರುಷನ ಹೆಸರನ್ನು ಕೂಗುತ್ತಾನೆ. ನಡುನಡುವೆ ಹುಚ್ಚನಂತೆ ಗಹಗಹಿಸಿ ಕೇಕೆಹಾಕಿ ನಗುತ್ತಾನೆ. ಎಲ್ಲೆಲ್ಲಿಯೂ ನಿಃಶಬ್ದ; ಭೀಷಣವಾಗಿದೆ; ಭೀಕರವಾಗಿದೆ; ಗಭೀರವಾಗಿದೆ; ರುದ್ರವಾಗಿದೆ.]

ರುದ್ರ— ದುರ್ಯೋಧನನ್. ಭೀಷ್ಮನ್. ದ್ರೋಣನ್. ಕರ್ಣನ್. ಅಭಿಮನ್ಯು. ಘಟೋತ್ಕಚನ್. ಭೀಮನ್. ಅರ್ಜುನನ್. ದ್ರೌಪದಿ. ಯುಧಿಷ್ಠಿರನ್. ಕೃಷ್ಣನ್!

(ಮುಸುಗು ಹಾಕಿಕೊಂಡಿರುವ ಅಸ್ಪಷ್ಟ ಆಕಾರಗಳು ಆ ಕತ್ತಲಲ್ಲಿ ಪಂಕ್ತಿ ಪಂಕ್ತಿಯಾಗಿ ಬರುತ್ತವೆ. ಅವರಲ್ಲಿ ಗಂಡಸರು, ಹೆಂಗಸರು, ಮಕ್ಕಳು, ವಿಧವೆಯರು, ವೀರರೂ ಎಲ್ಲ ಇದ್ದಾರೆ. ಅವರೆಲ್ಲ ಮಡಿದ ಪಾಂಡವ ಕೌರವ ಪಕ್ಷದವರ ಬಂಧುಗಳು. ಕೌರವ ಪಕ್ಷದವರು ಒಂದು ಸಾಲಾಗಿ ಮಹಾರುದ್ರನ ಎಡದಿಂದ ಬಲಕ್ಕೆ ಹೋಗಿ ಮರೆಯಾಗುತ್ತಾರೆ. ಪಾಂಡವ ಪಕ್ಷದವರು ಇನ್ನೊಂದು ಸಾಲಾಗಿ ಬಲದಿಂದ ಎಡಕ್ಕೆ ಹೋಗಿ ಮರೆಯಾಗುತ್ತಾರೆ. ಮಹಾದೇವನು ಎಲ್ಲವನ್ನೂ ದುರದುರನೆ ನೋಡುತ್ತ ನಿಂತಿದ್ದು ಪುನಃ ಪ್ರಾರಂಭಿಸುತ್ತಾನೆ. ಆತನ ಧ್ವನಿ ದೂರದ ಗುಡುಗಿನಂತೆ ಗಂಭೀರವಾಗಿ ಮೊಳಗುತ್ತದೆ; ಶ್ಮಶಾನ ಮೌನವನ್ನು ತೂಗಿ ಮಲಗಿಸುವ ಜೋಗುಳದಂತಿದೆ.)

ಎಲ್ಲ ದಾನಗಳು, ಎಲ್ಲ ಧರ್ಮಗಳು,
ಕಡೆಗಿಲ್ಲಿಗೇ—ಎನ್ನ ಬಳಿಗೆ!
ಎಲ್ಲ ಪಾಪಗಳು, ಎಲ್ಲ ಪುಣ್ಯಗಳು,

ಕಡೆಗೊಂದು ನಗೆಗೇ—ಭಸ್ಮಮೆನಗೆ!
ನಕ್ಷತ್ರ ಖಚಿತವಿಾ ನಭೋವಿತಾನಂ,
ಸಸ್ಯಶೋಭಿತವಿಾ ಹಿರಿಯ ಭೂಮಿ,
ನೊರೆದು ಭೋರಿಡುವ ಎಲ್ಲೆ ಕಾಣದಿಹ
ಕಡಲ ಹಬ್ಬುಗೆಯು—ಕಡೆಗಿಲ್ಲಿಗೇ!
—ಕಡೆಗಿಲ್ಲಿಗೇ!—ಕಡೆಗಿಲ್ಲಿಗೇ!
ಕಾಲ ದೇಶಗಳು, ಜನನ ಮರಣಗಳು,
ಜೀವಕೋಟಿಗಳು—ಮಸಣದೆಡೆಗೇ!
—ಮಸಣದೆಡೆಗೇ! ಕಟ್ಟ ಕಡೆಗೇ!
ಎನ್ನ ಹುಚ್ಚಿಸಿಂಧುದಿಸಿದೀ ಸೃಷ್ಟಿ
ಕಡೆಗೆ ತುತ್ತಾಗುವುದು—ಎನ್ನ ಹುಚ್ಚಿಗೇ!
—ಎನ್ನ ಹುಚ್ಚಿಗೇ! ಎನ್ನ ಹುಚ್ಚಿಗೇ!
ಇದೆ ಜಗದ ಮೊತ್ತಮೊದಲಿದೆ ಜಗದ ತುತ್ತತುದಿ,
ಇದೆ ಜಗದ ಕಟ್ಟಕಡೆ ನೆಚ್ಚಿಗೇ!
—ಕಡೆ ನೆಚ್ಚಿಗೇ! ಕಡೆ ನೆಚ್ಚಿಗೇ!

(ರುದ್ರನು ದೃಷ್ಟಿಜ್ವಾಲೆಯನ್ನು ಬೀರಿ ಧ್ಯಾನಮಗ್ನನಾಗುತ್ತಾನೆ. ಶ್ರೀಕೃಷ್ಣನು ಮೆಲ್ಲಗೆ ಹೆಜ್ಜೆಯಿಡುತ್ತ ಗಂಭೀರವಾಗಿ ಪ್ರವೇಶಿಸುತ್ತಾನೆ. ರುದ್ರನನ್ನು ನಟ್ಟ ನೋಟದಿಂದ ನೋಡಿ ಕರೆಯುತ್ತಾನೆ.)

ಕೃಷ್ಣ— ಮಹಾದೇವ!

ರುದ್ರ— (ನಿಧಾನವಾಗಿ ಕಣ್ಣು ತೆರೆದು ಕೃಷ್ಣನನ್ನು ನೋಡಿ) ವಾಸುದೇವ, ಬಂದೆಯೇನ್?

ಕೃಷ್ಣ— ಬಂದೆನಯ್, ಭಗವನ್. ನೀನೇನ್ ರುದ್ರನಾಟಕದ ಕೊನೆಯ ದೃಶ್ಯಾಭಿನಯದೊಳ್ ತಲ್ಲೀನನಾಗಿರ್ಪೆಯ್ಯೆಸೆ!

ರುದ್ರ— ಅಹುದಹುದು, ಸೂತ್ರಧಾರ! (ನಸುನಕ್ಕು) ನಿನ್ನ ನಾಟಕಂ ನೇರವಾದುದೇ?

ಕೃಷ್ಣ— ನಿನ್ನ ನೆರವೊಂದಿರೆ ನೇರವಾಗದೇನ್!

ರುದ್ರ— ರಸಿಕರ್ಗೆ ಗುರು ನೀನ್. ನಿನ್ನ ದೃಶ್ಯಕಾವ್ಯದ ಸೊಬಗುಮಂ ಗಭೀರಮುಮಂ ಬಣ್ಣಿಸಲರಿದು.—ಪೂರ್ಣಂ: ನವರಸ ಪರಿ

ಪೂರ್ಣಂ !

ಕೃಷ್ಣ— ನಿನ್ನೊಂದಾವೇಶವಿರೆ ಸಫಲಂ ರುದ್ರಕಾವ್ಯಂ!

ರುದ್ರ— ವಾಸುದೇವ, ಮುಂದಾವ ಕಾವ್ಯಮಂ ಕಟ್ಟುವಯ್ ?

ಕೃಷ್ಣ— ಕಲಿಯುಗ ಮಹಾಕಾವ್ಯಮನ್ ! ನಾಳೆಯೆ ಪೀಠಿಕಾ ದೃಶ್ಯಾರಂಭಂ ಕಲಿಯುಗ ಪ್ರಾರಂಭಂ !

ರುದ್ರ— ರಸಮೂರ್ತಿ, ನೋಡಲ್ಬಯಸುವೆನ್ ಆ ಕಥಾಸಂವಿಧಾನಮನ್.

ಕೃಷ್ಣ— ತೋರ್ದಪೆನ್ ದಿವ್ಯದರ್ಶನಮನ್. ಕಾಣದೊ, ಮತ್ಪ್ರಣೀತಂ ಕಲಿಯುಗ ಮಹಾಲಲಿತಕಾವ್ಯಂ.

(ಶ್ರೀಕೃಷ್ಣನು ಕೈ ತೋರುತ್ತಾನೆ. ಕಾಲದ ಪರದೆಗಳು ಒಂದೊಂದಾಗಿ ತೆರೆಯುತ್ತವೆ. ರುದ್ರನು ಪ್ರಸನ್ನನಾಗಿ ನೋಡುತ್ತಾನೆ.

ರುದ್ರ— ವರ್ಣಿಸಯ್, ವಿಶ್ವಕವಿ, ಆ ಮಿಂಚುವ ದೃಶ್ಯಮಾಲೆಗಳನ್ !

ಕೃಷ್ಣ— ಬಣ್ಣಿಪೆನ್ ಮುಖ್ಯಮನ್ ;
ನೋಡದೋ ಭಾರತವರ್ಷಂ, ಉಪನಿಷದಾರಾಮಂ . . .
ಗೌತಮ ಬುದ್ಧನವನ್, ಮೌಢ್ಯನಿವಾರಕನ್ ! . . .
ಅಶೋಕನ್, ಚಕ್ರವರ್ತಿಶ್ರೇಷ್ಠನ್ ! . . .
ಏಷ್ಯಾಖಂಡಂ ! . . . ಕ್ರಿಸ್ತನ್ ! ದೀನರಕ್ಷಕನ್ . . . .
ಯವನದೇಶಂ ! . . . ಜ್ಞಾನಿಗಳವರ್ ! . . .
ರೋಮನ್ ಚಕ್ರಾಧಿಪತ್ಯಂ . . . ಐರೋಪ್ಯ ಖಂಡಂ . . .
ಆಂಗ್ಲೇಯ ದೇಶಂ ! . . . ಯಂತ್ರಕೌಶಲಂ ! . . . ಇದೋ,
ಅರಬ್ಬೀಸ್ಥಾನಂ . . . . ಮಹಮ್ಮದನ್ . . . . ಕೇರಳಂ . . . .
ಆಚಾರ್ಯ ಶಂಕರನ್ . . . . ಮೇಧಾವಿ, ಸಿದ್ಧನ್ ! . . . .
ಮೊಗಲ ಸಾಮ್ರಾಜ್ಯಂ . . . . ಮಹಾರಾಷ್ಟ್ರಂ . . . .
ಕನ್ನಡದೇಶಂ . . . . ಕವಿರನ್ನನ್ . . . . ವಿಜಯನಗರಂ . . . .
ಪಾಶ್ಚಾತ್ಯ ಘೋರ ಯುದ್ಧಂ ! . . . ರಷ್ಯಾದೇಶಂ ! . . .
ವಿಪ್ಲವಂ . . . . ಪ್ರಜಾಧಿಪತ್ಯಂ . . . ಚಕ್ರವರ್ತಿವಿನಾಶಂ . . .
ವಿಪ್ಲವಮುತ ಪ್ರಚಾರಂ . . . . ಚೀನಾದೇಶಂ . . . .
ರಕ್ತಪ್ರವಾಹಂ .... ಪಿಡಿಗುಂಡುಗಳಾಟಂ .... ರೌದ್ರಂ !
ಪಿಶಿತಾಶಾಕ್ರಾಂತ ಭಾರತವರ್ಷಂ .... ದಾರಿದ್ರ್ಯಂ ....

ದೌರ್ಬಲ್ಯಂ .... ಶ್ರೀರಾಮಕೃಷ್ಣ ಪರಮಹಂಸರ್ !
(ರುದ್ರನೂ ಕೃಷ್ಣನೂ ನಮಸ್ಕಾರ ಮಾಡುತ್ತಾರೆ.)
ಸರ್ವಧರ್ಮ ಸಮನ್ವಯಾಚಾರ್ಯನ್ .... ವಿವೇಕಾನಂದನ್
ಸ್ವಾತಂತ್ರ್ಯಸಂಗ್ರಾಮಂ .... ಅಹಿಂಸಾವ್ರತಂ ....
ಮಹಾತ್ಮರ್ .... ಸತ್ಯಾಗ್ರಹಂ! .... ಅತ್ಯಾಚಾರಂ!! .
ದೌರಾತ್ಮ್ಯಂ!!.

(ರುದ್ರನು ಶೂಲವೆತ್ತುತ್ತಾನೆ)

ತಾಳ್ಮೆ, ತಾಳ್ಮೆ, ಓ ರುದ್ರ. ಕೆಡಿಸದಿರ್ ಕಾವ್ಯಮನ್ ...
ಮುಂಗಾಣಯ್ .... ಸಾರ್ವಭೌಮತ್ವ ಭಂಗಂ ....
ಸ್ವತಂತ್ರ ಭಾರತರಂಗಂ .... ಸರ್ವಪ್ರಜಾಧಿಪತ್ಯಂ ....
ಸರ್ವಸಮತ್ವಂ .... ಜಗತ್‌ಕಲ್ಯಾಣಂ ....
ಭೂವೈಕುಂಠಂ .... ನೋಡದೋ : ....
ದೂರದೊಳ್, ಬಹುದೂರದೊಳ್, ಕಾಲಗರ್ಭದೊಳ್
ಸಾಮಾನ್ಯ ಮಾನವ ಸಂಸಾರಂ .... ಸತಿಪತಿಗಳ ಶೃಂಗಾರ
ಮಕ್ಕಳಾಟಂ, ನೋಟಂ, ಕಾವ್ಯಂ,
ಸುಮಧುರಂ .... ದಿವ್ಯಂ .... ಸುಶ್ರಾವ್ಯಂ!

(ಇದ್ದಕಿದ್ದಹಾಗೆ ದೃಶ್ಯ ಮಾಯವಾಗಿ, ಕವಿದಿದ್ದ ಕತ್ತಲೆ ಇನ್ನೂ ದಟ್ಟ
ಫಕ್ಕನೆ ಅತ್ಯಂತ ಕಾಂತಿಯುಕ್ತವಾಗುತ್ತದೆ. ಮಾಯವಾದ ಕೃಷ್ಣ ರುದ್ರರ ಸವಿ
ಅಟ್ಟಹಾಸ ಗಗನದ ಸುನೀಲ ಶೂನ್ಯದಿಂದ ತರಂಗ ತರಂಗವಾಗಿ ಕೇಳಿಬರು
ಕಾಂತಿ ಮತ್ತೂ ಹೆಚ್ಚುತ್ತದೆ. ಲಯಮೂರ್ತಿಯಾದ ರುದ್ರನ ನಗೆಯೊಂದಿಗೆ
ಮೂರ್ತಿಯಾದ ಶ್ರೀಕೃಷ್ಣನ ನಗೆ ಲಗ್ನವಾಗಿ, ಆ ಮಹಾ ಜಗದ್ವ್ಯಕ್ತಿಗಳ ಸುಮ
ವಿಕಟಾಟ್ಟಹಾಸ ಮಾಯವಾದ ಶ್ಮಶಾನ ಮೌನದ ಗರ್ಭದಿಂದ ಗಭೀರ
ಹೊರಹೊಮ್ಮಿ ವಿಶ್ವವ್ಯಾಪಿಯಾಗುತ್ತದೆ.)




ಪ್ರೆಸ್, ಮೈಸೂರು - ೧

# ಉದಯರವಿ ಪ್ರಕಾಶನ : ಕುವೆಂಪು ಕೃತಿಗಳು

| | | ಉತ್ತಮ | ಸಾದಾ |
|---|---|---|---|
| ೧. | ಶ್ರೀ ರಾಮಾಯಣ ದರ್ಶನಂ (ಮಹಾಕಾವ್ಯ) ... | ಪ್ರಸಾರಾಂಗದಲ್ಲಿ | |
| ೨. | ವಿಭೂತಿಪೂಜೆ (ವಿಮರ್ಶೆ) ... | — | ೪-೫೦ |
| ೩. | ರಕ್ತಾಕ್ಷಿ (ನಾಟಕ) ... | ೫-೦೦ | ೩-೦೦ |
| ೪. | ಬೆರಳ್‌ಗೆ ಕೊರಳ್ (ನಾಟಕ) ... | — | ೨-೭೫ |
| ೫. | ಕಾವ್ಯವಿಹಾರ (ವಿಮರ್ಶೆ) ... | ೬-೦೦ | ೩-೦೦ |
| ೬. | ಚಂದ್ರಮಂಚಕೆ ಬಾ, ಚಕೋರಿ (ಪ್ರೇಮಗೀತೆಗಳು) | ೫-೦೦ | ೩-೦೦ |
| ೭. | ಪ್ರೇಮಕಾಶ್ಮೀರ (ಪ್ರೇಮ ಗೀತೆಗಳು) ... | ೪-೦೦ | ೨-೫೦ |
| ೮. | ಸಂನ್ಯಾಸಿ ಮತ್ತು ಇತರ ಕತೆಗಳು ... | ೬-೦೦ | ೩-೦೦ |
| ೯. | ಕಾನೂರು ಹೆಗ್ಗಡತಿ (ಮಹಾಕಾದಂಬರಿ) ... | ೨೦-೦೦ | ೧೮-೦೦ |
| ೧೦. | ಕೋಗಿಲೆ ಮತ್ತು ಸೋವಿಯಟ್ ರಷ್ಯ (ಕ್ರಾಂತಿ ಕವನಗಳು) ... | ೪-೫೦ | ೨-೫೦ |
| ೧೧. | ಪಕ್ಷಿಕಾಶಿ (ಪ್ರಕೃತಿ ಕವನಗಳು) ... | ೬-೦೦ | ೩-೦೦ |
| ೧೨. | ಅಗ್ನಿಹಂಸ ([illegible]) ... | ೬-೦೦ | ೩-೦೦ |
| ೧೩. | ಬಿರುಗಾಳಿ (ನಾಟಕ) ... | ೬-೦೦ | ೩-೦೦ |
| ೧೪. | ಚಿತ್ರಾಂಗದಾ (ಕಾವ್ಯ) ... | ೬-೦೦ | ೪-೦೦ |
| ೧೫. | ಇಕ್ಷುಗಂಗೋತ್ರಿ (ಸ್ವಾತಂತ್ರ್ಯೋದಯ ಕವನಗಳು) | — | ೪-೦೦ |
| ೧೬. | ಸಾಹಿತ್ಯ ಪ್ರಚಾರ ([illegible] ಭಾಷಣಗಳು) | — | ೩-೦೦ |
| ೧೭. | ನವಿಲು (ಪ್ರಕೃತಿ ಕವನಗಳು) ... | — | ೩-೦೦ |
| ೧೮. | ಕಥನ ಕವನಗಳು ... | — | ೩-೦೦ |
| ೧೯. | ಕೊಳಲು (ಕವನಗಳು) ... | — | ೩-೦೦ |
| ೨೦. | ಯಮನ ಸೋಲು (ನಾಟಕ) ... | ೧-೫೦ | — |
| ೨೧. | ನನ್ನ ಗೋಪಾಲ (ಮಕ್ಕಳ ನಾಟಕ) ... | ೧-೦೦ | — |
| ೨೨. | ತಪೋನಂದನ (ವಿಮರ್ಶೆ) | — | ೩-೦೦ |
| ೨೩. | ದ್ರೌಪದಿಯ ಶ್ರೀಮುಡಿ (ವಿಮರ್ಶೆ) .. | ೫-೦೦ | ೩-೦೦ |
| ೨೪. | ಮಲೆನಾಡಿನ ಚಿತ್ರಗಳು ... | — | ೪-೦೦ |
| ೨೫. | ವಾಲ್ಮೀಕಿಯ ಭಾಗ್ಯ (ನಾಟಕ) ... | ೧-೫೦ | — |
| ೨೬. | ಬೊಮ್ಮನಹಳ್ಳಿಯ ಕಿಂದರಿಜೋಗಿ (ಸಚಿತ್ರ) ... | — | ೧-೫೦ |
| ೨೭. | ಶ್ಮಶಾನ ಕುರುಕ್ಷೇತ್ರಂ (ನಾಟಕ) ... | — | ೨-೫೦ |
| ೨೮. | ಮಹಾರಾತ್ರಿ (ನಾಟಕ) ... | — | ೧-೫೦ |
| ೨೯. | ಜಲಗಾರ (ನಾಟಕ) ... | — | ೧-೫೦ |

[ಹಿಂಬದಿ ನೋಡಿ]